WPP-47

# ಕರ್ನಾಟಕ ರಾಜ್ಯಪತ್ರ


**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೪೭ | ಬೆಂಗಳೂರು, ಗುರುವಾರ, ಜುಲೈ ೧೯, ೨೦೧೨ (ಆಷಾಢ ೨೮, ಶಕ ವರ್ಷ ೧೯೩೪) | ಸಂಚಿಕೆ ೨೯ |
|---|---|---|


## ಭಾಗ–೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಅರಣ್ಯ ಸಂಚಾರಿ ದಳ, ಬೆಂಗಳೂರು ರವರ ನ್ಯಾಯಾಲಯ.**

**ಎಫ್.ಓ.ಸಿ ಸಂಖ್ಯೆ: 91/1992–93 ದಿನಾಂಕ:13/07/1992.**

**ಸಂಖ್ಯೆ:ಎ1.ಅಅಪ್ರ.71A.91/1992–93, ದಿನಾಂಕ:20/12/2011**

**ಉಪಸ್ಥಿತರು** : ಶ್ರೀ.ಕೆ.ಬಿ.ಮಂಜುನಾಥ, ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಬೆಂಗಳೂರು.

**ಪಿರ್ಯಾದಿ** : ವಲಯ ಅರಣ್ಯಾಧಿಕಾರಿ, ಅರಣ್ಯ ಸಂಚಾರಿ ದಳ, ಬೆಂಗಳೂರು.

**ಅರ್ಜಿದಾರರು** : 1–ಪ್ಯಾರೇಜಾನ್ ಬಿನ್ ಅಬ್ದುಲ್ ಸತ್ತಾರ್,
**ಆರೋಪಿಗಳು** ರಸೀಲ್ದಾರ್ ಸ್ಟ್ರೀಟ್, ಶೇಷಾದ್ರಿಪುರಂ, ಬೆಂಗಳೂರು.

2–ಸಲೀಂ ಬಿನ್ ರತ್ನಂ, ರಸಲ್ದಾರ್ ಸ್ಟ್ರೀಟ್, ಶೇಷಾದ್ರಿಪುರಂ, ಬೆಂಗಳೂರು.

3–ಅಬ್ದುಲ್ ಜಬ್ಬಾರ್ ಬಿನ್ ಸೈಯದ್ ಸಂಶೀರ್.

(1 ರಿಂದ 3ರ ವರೆಗಿನ ಆರೋಪಿಗಳನ್ನು ಬಂದಿಸಿದೆ)

**ಪ್ರಕರಣದ ಮುಖ್ಯಾಂಶಗಳು:**

1. ಬೆಂಗಳೂರು ನಗರದ ಶೇಷಾದ್ರಿಪುರಂನ ರಸಲ್ದಾರ್ ರಸ್ತೆಯ ಮನೆ ನಂ.11ರಲ್ಲಿ ಶ್ರೀಗಂಧ ದಾಸ್ತಾನಿರುವ ಬಗ್ಗೆ ಖಚಿತ ಮಾಹಿತಿಯ ಮೇರೆಗೆ ದಿನಾಂಕ:13–07–1992ರಂದು ಅಪರಾಹ್ನ 2.00 ಗಂಟೆಯ ಸಮಯದಲ್ಲಿ ಅರಣ್ಯ ಸಂಚಾರಿ ದಳದ ಸಿಬ್ಬಂದಿಗಳು ಸದರಿ ಸ್ಥಳಕ್ಕೆ ಭೇಟಿ ಪರಿಶೀಲಿಸಲಾಗಿ, ಅಬ್ದುಲ್ ಸತ್ತಾರ್ ಎಂಬುವವರ ಮಗನಾದ ಪ್ಯಾರೇಜಾನ್ ಎಂಬುವವರ ಮನೆಯ ಬಾಗಿಲು ಬಳಿ ಬಲಭಾಗಕ್ಕೆ ಮೇಜಿನ ಕೆಳಗೆ ಒಂದು ಸ್ಯೂಟ್‌ಕೇಸ್ ಇರುವುದು ಕಂಡುಬಂದಿರುತ್ತದೆ. ಸದರಿ ಸ್ಯೂಟ್‌ಕೇಸನ್ನು ತೆಗೆಯಿಸಿ ನೋಡಲಾಗಿ, ವಿವಿಧ ಅಳತೆಯ ಒಟ್ಟು 23 ಶ್ರೀಗಂಧದ ಮರದ ತುಂಡು ಮತ್ತು ಚಕ್ಕೆಗಳಿದ್ದು, ಇದರ ಒಟ್ಟು ತೂಕ 9.2 ಕೆ.ಜಿ ಇರುತ್ತದೆ. ಈ ಬಗ್ಗೆ ಮನೆಯ ಮಾಲೀಕನಾದ ಪ್ಯಾರೆಜಾನ್ ಇವರನ್ನು ವಿಚಾರಿಸಲಾಗಿ, ಶ್ರೀಗಂಧವನ್ನು ಚಿಕ್ಕಮಗಳೂರು ಜಿಲ್ಲೆಯ ಆಲ್ದೂರು ಗ್ರಾಮವಾಸಿಯಾದ ಭಾಷ ಎಂಬುವವರು ತಂದು ಹಣಕ್ಕೆ ಕೊಟ್ಟಿರುತ್ತಾರೆ ಎಂದು ತಿಳಿಸಿರುತ್ತಾರೆ. ಶ್ರೀಗಂಧವನ್ನು ಮನೆಯಲ್ಲಿ ಇಟ್ಟುಕೊಳ್ಳಲು ಇಲಾಖಾ ರಹದಾರಿಯನ್ನು ಕೇಳಲಾಗಿ, ಆತನ ಬಳಿ ಯಾವುದೇ ರಹದಾರಿ ಇರುವುದಿಲ್ಲವೆಂದು ಹೇಳಿಕೆ ನೀಡಿರುತ್ತಾರೆ. ಈ ಕೃತ್ಯವು ಕರ್ನಾಟಕ ಅರಣ್ಯ ಕಾಯ್ದೆ 1963 ಹಾಗೂ ಕರ್ನಾಟಕ ಅರಣ್ಯ ಅಧಿನಿಯಮ 1969 ಉಲ್ಲಘಿಸಿರುವ ಕಾರಣ, ಆರೋಪಿ ಪ್ಯಾರೆಜಾನ್ ಹಾಗೂ ಆತನ ಸಹಚರರಾದ ಸಲೀಂ ಮತ್ತು ಅಬ್ದುಲ್ ಜಬ್ಬಾರ್ ಇವರುಗಳನ್ನು ಬಂಧಿಸಿ 9.2 ಕೆ.ಜಿ ಶ್ರೀಗಂಧವನ್ನು ಪಂಚನಾಮೆಯ ಸಹಿತ ಸರ್ಕಾರದ ಪರ ಅಮಾನತ್ತುಪಡಿಸಿಕೊಂಡು ಅರಣ್ಯ ಅಪರಾಧ ಮೊಕದ್ದಮೆ ದಾಖಲಿಸಿರುತ್ತಾರೆ.

2. ಹೆಚ್ಚಿನ ತನಿಖೆಗಾಗಿ ಒಟ್ಟು 9.2 ಕೆ.ಜಿ ಶ್ರೀಗಂಧವನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಅರಣ್ಯ ಸಂಚಾರಿ ದಳ, ಬೆಂಗಳೂರು ರವರ ಸಮಕ್ಷಮ ಹಾಜರುಪಡಿಸಿರುತ್ತಾರೆ. ಜಪ್ತು ಮಾಡಲಾದ ಮುದ್ದೆಮಾಲನ್ನು ಸುರಕ್ಷತೆಗಾಗಿ ಅರಣ್ಯ ಸಂಚಾರಿ ದಳದ ದಾಸ್ತಾನು ಮಳಿಗೆಯಲ್ಲಿ ಇಡಲಾಗಿರುತ್ತದೆ.

3. ಸೂಕ್ತ ರಹದಾರಿ ಇಲ್ಲದೇ ಅಕ್ರಮವಾಗಿ ಶ್ರೀಗಂಧವನ್ನು ದಾಸ್ತಾನು ಮಾಡಿರುವುದು ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 87ರ ಉಲ್ಲಂಘನೆಯಾಗಿದ್ದು, ಸದರಿ ಕಾಯ್ದೆಯ ಸೆಕ್ಷನ್ 71ಎ ರಡಿಯಲ್ಲಿ ಕ್ರಮ ಜರುಗಿಸಲು ಅಮಾನತ್ತುಪಡಿಸಿಕೊಂಡಿರುವ 9.212 ಕೆ.ಜಿ ಶ್ರೀಗಂಧವನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಕ್ರಮ ಜರುಗಿಸುವಂತೆ ವಲಯ ಅರಣ್ಯಾಧಿಕಾರಿಗಳು, ಅರಣ್ಯ ಸಂಚಾರಿ ದಳ, ಬೆಂಗಳೂರು ಇವರು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಬೆಂಗಳೂರು ರವರನ್ನು ಕೋರಿರುತ್ತಾರೆ.

4. ಪ್ರಕರಣಕ್ಕೆ ಸಂಬಂಧಿಸಿದ ಸರ್ಕಾರಿ ಪರ ಸಾಕ್ಷಿಗಳಾದ ಶ್ರೀ.ಕೆ.ವಿ.ಶ್ರೀನಿವಾಸಪ್ಪ ಬಿನ್ ಲೇಟ್.ಶ್ರೀ.ವರದಪ್ಪ, ವಲಯ ಅರಣ್ಯಾಧಿಕಾರಿ ಹಾಗೂ ಶ್ರೀ.ರಂಗಶಾಮಯ್ಯ ಬಿನ್ ಶ್ರೀ.ವೆಂಕಟಪ್ಪ, ವನಪಾಲಕ (ಅಂದಿನ ಅರಣ್ಯ ರಕ್ಷಕ) ಇವರುಗಳ ಮುಖ್ಯ ವಿಚಾರಣೆಯನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಬೆಂಗಳೂರು ರವರ ಸಮಕ್ಷಮ ಸಹಾಯಕ ಸರ್ಕಾರಿ ಅಭಿಯೋಜಕರು ಪಡೆದಿರುತ್ತಾರೆ.

5. ಸರ್ಕಾರಿ ಸಾಕ್ಷಿಗಳು ನೀಡಿದ ಹೇಳಿಕೆಗಳನ್ನು ಪರಿಶೀಲಿಸಲಾಗಿ, ದಿನಾಂಕ:13–07–1992ರಂದು ಬೆಂಗಳೂರು ನಗರದ ಶೇಷಾದ್ರಿಪುರಂನ ರಸಲ್ದಾರ್ ರಸ್ತೆಯ ಮನೆ ನಂ.11ರಲ್ಲಿ ಅಕ್ರಮವಾಗಿ 9.2 ಕೆ.ಜಿ ಶ್ರೀಗಂಧವನ್ನು ದಾಸ್ತಾನು ಮಾಡಿ ಕರ್ನಾಟಕ ಅರಣ್ಯ ಕಾಯ್ದೆ 1963 ಉಲ್ಲಂಘನೆ ಮಾಡಿರುವ ಬಗ್ಗೆ ಸಾಕ್ಷಿ ನೀಡಿರುವುದರಿಂದ ಹೆಚ್ಚಿನ ವಿಚಾರಣೆ ಅವಶ್ಯಕತೆ ಇಲ್ಲವೆಂದು ಸರ್ಕಾರಿ ವಕೀಲರು ವಾದವನ್ನು ಮಂಡಿಸಿರುತ್ತಾರೆ.

6. ಸರ್ಕಾರಿ ಸಾಕ್ಷಿಗಳು ನೀಡಿರುವ ಹೇಳಿಕೆಗಳು ಮತ್ತು ಪ್ರಕರಣದಲ್ಲಿ ಲಭ್ಯವಿರುವ ದಾಖಲೆಗಳನ್ನು ಆಧರಿಸಿ ಸರ್ಕಾರಿ ವಕೀಲರು ವಾದವನ್ನು ಮಂಡಿಸಿರುತ್ತಾರೆ. ಸರ್ಕಾರಿ ವಕೀಲರ ವಾದ ಹಾಗೂ ಹಾಜರುಪಡಿಸಿರುವ ದಾಖಲೆಗಳನ್ನು ಪರಿಶೀಲಿಸಲಾಯಿತು. ಪ್ರತಿವಾದಿಗಳು ಹಾಜರಿರದ ಕಾರಣ, ಅವರ ವಿಳಾಸ ಪತ್ತೆಯಾಗದ ಕಾರಣ, ನನ್ನ ಎದುರಿನಲ್ಲಿ ಹಾಜರುಪಡಿಸಿರುವ ದಾಖಲೆಗಳ ಆದಾರದ ಮೇಲೆ ತೀರ್ಮಾನವನ್ನು ಕೈಗೊಳ್ಳಬೇಕಾಗಿರುತ್ತದೆ. ತೀರ್ಮಾನವನ್ನು ಕೈಗೊಳ್ಳಲು ಈ ಕೆಳಕಂಡ ಅಂಶಗಳನ್ನು ಪರಿಗಣಿಸಬೇಕಾಗಿದೆ.

7(1) ಸದರಿ ಪ್ರಕರಣದಲ್ಲಿ ಅಮಾನತ್ತುಪಡಿಸಿಕೊಳ್ಳಲಾಗಿರುವ ಒಟ್ಟು 9.2 ಕೆ.ಜಿ ಶ್ರೀಗಂಧವನ್ನು ಅಕ್ರಮವಾಗಿ ದಾಸ್ತಾನು ಮಾಡಿರುವುದು ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 87ರ ಉಲ್ಲಂಘನೆಯಾಗಿದೆಯೇ?

7(2) ಸದರಿ ಪ್ರಕರಣದಲ್ಲಿ ಅಮಾನತ್ತುಪಡಿಸಿಕೊಳ್ಳಲಾಗಿರುವ ಒಟ್ಟು 9.2 ಕೆ.ಜಿ ಶ್ರೀಗಂಧವನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆಯೇ?

7(3) ಮೇಲಿನ ಅಂಶಗಳಿಗೆ ಅನುಗುಣವಾಗಿ ಯಾವ ಆದೇಶ?
ಮೇಲಿನ ಅಂಶಗಳಿಗೆ ನನ್ನ ಉತ್ತರ ಈ ಕೆಳಕಂಡಂತೆ ಇರುತ್ತದೆ.

7(4) ಮೊದಲನೇ ಅಂಶಕ್ಕೆ ನನ್ನ ಉತ್ತರ ಅಹುದು ಎಂಬುದಾಗಿರುತ್ತದೆ.

7(5) ಎರಡನೇ ಅಂಶಕ್ಕೆ ನನ್ನ ಉತ್ತರ ಅಹುದು ಎಂಬುದಾಗಿರುತ್ತದೆ.

7(6) ಅಂತಿಮ ಆದೇಶವನ್ನು ಈ ಕೆಳಕಂಡ ಕಾರಣಗಳಿಗೆ ನೀಡಲಾಗಿದೆ.

8. ದಿನಾಂಕ:13–07–1992ರಂದು ಬೆಂಗಳೂರು ನಗರದ ಶೇಷಾದ್ರಿಪುರಂನ ರಸಲ್ದಾರ್ ರಸ್ತೆಯ ಮನೆ ನಂ.11ರಲ್ಲಿ ಅಕ್ರಮವಾಗಿ 9.2 ಕೆ.ಜಿ ಶ್ರೀಗಂಧವನ್ನು ದಾಸ್ತಾನು ಮಾಡಿರುವುದು ಕರ್ನಾಟಕ ಅರಣ್ಯ ಕಾಯ್ದೆ 1963 ರ ಸೆಕ್ಷನ್ 87ರ ಉಲ್ಲಂಘನೆಯಾಗಿರುತ್ತದೆ. ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 84ರ ಮೇರೆಗೆ ಶ್ರೀಗಂಧವು ರಾಜ್ಯ ಸರ್ಕಾರದ ಸ್ವತ್ತಾಗಿದ್ದು, ಅದರ ಮಾಲೀಕತ್ವವು ಸಾಬೀತಾಗುವವರೆಗೆ ರಾಜ್ಯ ಸರ್ಕಾರದ ಸ್ವತ್ತೆಂದು ಪರಿಗಣಿಸಬೇಕಾಗಿರುತ್ತದೆ. ಅರಣ್ಯ ಸಿಬ್ಬಂದಿಯು ದಾಖಲಿಸಿರುವ ಮೊಕದ್ದಮೆಯು ಅರಣ್ಯ ಕಾಯ್ದೆಯ ವ್ಯಾಪ್ತಿಯಲ್ಲಿ ಸರಿ ಇರುತ್ತದೆ. ಸರ್ಕಾರಿ ಪರ ಸಾಕ್ಷಿಗಳು ಸಹ ಸದರಿ ಶ್ರೀಗಂಧವನ್ನು ಅಕ್ರಮವಾಗಿ ದಾಸ್ತಾನು ಮಾಡಿರುವುದನ್ನು ವಿಚಾರಣಾ ಸಮಯದಲ್ಲಿ ಹೇಳಿಕೆ ನೀಡಿರುತ್ತಾರೆ. ಬಂಧಿಸಲಾದ ಆರೋಪಿಗಳ ಹೇಳಿಕೆಯಲ್ಲಿಯೂ ಸಹ ಶ್ರೀಗಂಧವನ್ನು ಅಕ್ರಮವಾಗಿ ಮಾರಾಟ ಮಾಡಲು ಯತ್ನಿಸಿರುವ ಬಗ್ಗೆ ಒಪ್ಪಿಕೊಂಡಿರುವ ಕಾರಣ, ಶ್ರೀಗಂಧವನ್ನು ಅಕ್ರಮವಾಗಿ ದಾಸ್ತಾನು ಮಾಡಿರುವುದು ಸ್ಪಷ್ಟವಾಗಿರುತ್ತದೆ. ಆದುದರಿಂದ ಒಟ್ಟು 9.2 ಕೆ.ಜಿ ಶ್ರೀಗಂಧವನ್ನು ಕರ್ನಾಟಕ ಅರಣ್ಯ ಕಾಯ್ದೆ 1963 ರ ಸೆಕ್ಷನ್ 84ರ ಮೇರೆಗೆ ಸರ್ಕಾರಿ ಸ್ವತ್ತಾಗಿದ್ದು, ಸೆಕ್ಷನ್ 87ರ ಉಲ್ಲಂಘನೆ ಆಗಿರುವುದು ಖಾತರಿಯಾಗಿರುತ್ತದೆ.

9. ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71ಎ ಮೇರೆಗೆ ಸದರಿ ಪ್ರಕರಣದಲ್ಲಿ ಅಮಾನತ್ತುಪಡಿಸಿಕೊಂಡಿರುವ ಸರ್ಕಾರ ಸ್ವತ್ತಾದ 9.2 ಕೆ.ಜಿ ಶ್ರೀಗಂಧವನ್ನು ಅಧಿಕೃತ ಅಧಿಕಾರಿಯ ಮುಂದೆ ಹಾಜರುಪಡಿಸಿರುವುದರಿಂದ ಅಂತಹ ಸ್ವತ್ತನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಅವಕಾಶವಿರುವುದರಿಂದ ಸದರಿ ಶ್ರೀಗಂಧವನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿರುತ್ತದೆ.

**ಆದೇಶ**

ನಾನು ಕೆ.ಬಿ.ಮಂಜುನಾಥ, ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಬೆಂಗಳೂರು ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71ಎ ರ ಮೇರೆಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಅರಣ್ಯ ಅಪರಾಧ ಮೊಕದ್ದಮೆ ಸಂಖ್ಯೆ:91/1992-93ರಲ್ಲಿ ಅಮಾನತ್ತು-ಪಡಿಸಿಕೊಂಡಿರುವ ಒಟ್ಟು 9.2 ಕೆ.ಜಿ ಶ್ರೀಗಂಧದ ಮರದ ತುಂಡು ಹಾಗೂ ಚಕ್ಕೆಗಳನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಈ ಮೂಲಕ ಆದೇಶಿಸುತ್ತೇನೆ.

ಈ ಆದೇಶವನ್ನು ಬೆರಳಚ್ಚುಗಾರರಿಗೆ ಉತ್ತಲೇಖನ ಕೊಟ್ಟಿದ್ದು, ಅವರು ಬೆರಳಚ್ಚಿಸಿದ ನಂತರ ತಿದ್ದುಪಡಿ ಮಾಡಿ ಈ ದಿನ ದಿನಾಂಕ:20-12-2011ರಂದು ತೆರೆದ ನ್ಯಾಯಾಲಯದಲ್ಲಿ ಘೋಷಿಸಲಾಗಿದೆ.

ಈ ಆದೇಶವು ರಾಜ್ಯಪತ್ರದಲ್ಲಿ ಪ್ರಕಟಗೊಂಡ 30 ದಿವಸಗಳ ನಂತರ ಜಾರಿಗೆ ಬರುತ್ತದೆ.

**ಕೆ.ಬಿ.ಮಂಜುನಾಥ**
ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಅರಣ್ಯ ಸಂಚಾರಿ ದಳ, ಬೆಂಗಳೂರು.

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಅರಣ್ಯ ಸಂಚಾರಿ ದಳ, ಬೆಂಗಳೂರು ರವರ ನ್ಯಾಯಾಲಯ.**

**ಎಫ್.ಓ.ಸಿ ಸಂಖ್ಯೆ: 270/1993-94 ದಿನಾಂಕ:01/11/1993.**

**ಸಂಖ್ಯೆ:ಎ1.ಅಅಪ್ರ.71A.270/1993-94, ದಿನಾಂಕ:27/03/2012**

| | | |
|---|---|---|
| **ಉಪಸ್ಥಿತರು** | : | ಶ್ರೀ.ಕೆ.ಬಿ.ಮಂಜುನಾಥ, ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಬೆಂಗಳೂರು. |
| **ಪಿರ್ಯಾದಿ** | : | ವಲಯ ಅರಣ್ಯಾಧಿಕಾರಿ, ಅರಣ್ಯ ಸಂಚಾರಿ ದಳ, ಬೆಂಗಳೂರು. |
| **ಅರ್ಜಿದಾರರು ಆರೋಪಿಗಳು** | : | ಪ್ಯಾರೇಜಾನ್ ಬಿನ್ ಲೇಟ್.ಅಬ್ದುಲ್ ಸತ್ತಾರ್, ರಸಲ್ದಾರ್ ಸ್ಟ್ರೀಟ್, ಶೇಷಾದ್ರಿಪುರಂ, ಬೆಂಗಳೂರು (ತಲೆಮರೆಸಿಕೊಂಡಿರುತ್ತಾರೆ). |

**ಪ್ರಕರಣದ ಮುಖ್ಯಾಂಶಗಳು:**

1. ಅಕ್ರಮವಾಗಿ ಶ್ರೀಗಂಧವನ್ನು ದಾಸ್ತಾನು ಮಾಡಿ ಕರ್ನಾಟಕ ಅರಣ್ಯ ಕಾಯ್ದೆ ಉಲ್ಲಂಘಿಸಿರುವ ಬಗ್ಗೆ ದೊರೆತ ಖಚಿತ ಮಾಹಿತಿಯ ಮೇರೆಗೆ ದಿನಾಂಕ:01-11-1993ರಂದು ಮಧ್ಯಾಹ್ನ 12.45ರ ಸಮಯದಲ್ಲಿ ಅರಣ್ಯ ಸಂಚಾರಿ ದಳದ ಸಿಬ್ಬಂದಿಗಳು ಬೆಂಗಳೂರು ನಗರ, ಶೇಷಾದ್ರಿಪುರಂನ ರಸಲ್ದಾರ್ ಸ್ಟ್ರೀಟ್ ರಸ್ತೆಯಲ್ಲಿರುವ ನಂ.105ರ ಮನೆ ಮೇಲೆ ದಾಳಿ ಮಾಡಲಾಗಿ, ಸದರಿ ಮನೆಯಲ್ಲಿ ಒಂದು ಪ್ಲಾಸ್ಟಿಕ್ ಚೀಲದಲ್ಲಿ ಮರದ ತುಂಡುಗಳನ್ನು ಶೇಖರಿಸಿಟ್ಟಿರುವುದು ಕಂಡುಬಂದಿರುತ್ತದೆ. ಅನುಮಾನಸ್ಪದವಾಗಿ ಇಡಲಾಗಿದ್ದ ಪ್ಲಾಸ್ಟಿಕ್ ಚೀಲವನ್ನು ತೆಗೆಯಿಸಿ ನೋಡಲಾಗಿ, ಅದರಲ್ಲಿ ಶ್ರೀಗಂಧದ ಬೇರು ಮತ್ತು ಕಾಂಡಗಳಿದ್ದು, ಮನೆಯ ಮಾಲೀಕರಾದ ಪ್ಯಾರೇಜಾನ್ ಬಿನ್ ಲೇಟ್.ಅಬ್ದುಲ್ ಸತ್ತಾರ್ ಎಂಬುವವರು ಪರಾರಿಯಾಗಿರುತ್ತಾರೆ. ನಂತರ ಶ್ರೀಗಂಧವನ್ನು ಒಟ್ಟು ತೂಕ ಮಾಡಲಾಗಿ, ಒಟ್ಟು 15.5 ಕೆ.ಜಿ ಇರುತ್ತದೆ. ಶ್ರೀಗಂಧವನ್ನು ಅಕ್ರಮವಾಗಿ ದಾಸ್ತಾನು ಮಾಡಿರುವ ಬಗ್ಗೆ ಅಕ್ಕಪಕ್ಕದವರನ್ನು ವಿಚಾರಿಸಲಾಗಿ, ಯಾವುದೇ ಮಾಹಿತಿ ಲಭ್ಯವಾಗದೇ ಇದ್ದ ಕಾರಣ, ಕರ್ನಾಟಕ ಅರಣ್ಯ ಕಾಯ್ದೆ 1963 ಹಾಗೂ ಕರ್ನಾಟಕ ಅರಣ್ಯ ಅಧಿನಿಯಮ 1969ರ ಉಲ್ಲಂಘನೆ ಮೇರೆಗೆ ಮನೆಯಲ್ಲಿದ್ದ 15.5 ಕೆ.ಜಿ ಶ್ರೀಗಂಧದ ಬೇರು ಮತ್ತು ಕಾಂಡಗಳನ್ನು ಪಂಚನಾಮೆ ಸಹಿತ ಸರ್ಕಾರದ ಪರ ಅಮಾನತ್ತುಪಡಿಸಿಕೊಂಡು ಅರಣ್ಯ ಅಪರಾಧ ಮೊಕದ್ದಮೆ ದಾಖಲಿಸಿರುತ್ತಾರೆ. ಹೆಚ್ಚಿನ ತನಿಖೆಗಾಗಿ ಒಟ್ಟು 15.5 ಕೆ.ಜಿ ಶ್ರೀಗಂಧವನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಅರಣ್ಯ ಸಂಚಾರಿ ದಳ, ಬೆಂಗಳೂರು ರವರ ಸಮಕ್ಷಮ ಹಾಜರುಪಡಿಸಿರುತ್ತಾರೆ. ಜಪ್ತು ಮಾಡಲಾದ ಮುದ್ದೆಮಾಲನ್ನು ಸುರಕ್ಷತೆಗಾಗಿ ಅರಣ್ಯ ಸಂಚಾರಿ ದಳದ ದಾಸ್ತಾನು ಮಳಿಗೆಯಲ್ಲಿ ಇಡಲಾಗಿರುತ್ತದೆ.

2. ಸೂಕ್ತ ಪರವಾನಿಗೆ ಇಲ್ಲದೇ ಅಕ್ರಮವಾಗಿ ಶ್ರೀಗಂಧವನ್ನು ದಾಸ್ತಾನು ಮಾಡಿರುವುದು ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 87ರ ಉಲ್ಲಂಘನೆಯಾಗಿದ್ದು, ಸದರಿ ಕಾಯ್ದೆಯ ಸೆಕ್ಷನ್ 71ಎ ರಡಿಯಲ್ಲಿ ಕ್ರಮ ಜರುಗಿಸಲು ಅಮಾನತ್ತುಪಡಿಸಿಕೊಂಡಿರುವ 15.5 ಕೆ.ಜಿ ಶ್ರೀಗಂಧವನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಕ್ರಮ ಜರುಗಿಸುವಂತೆ ವಲಯ ಅರಣ್ಯಾಧಿಕಾರಿಗಳು, ಅರಣ್ಯ ಸಂಚಾರಿ ದಳ, ಬೆಂಗಳೂರು ಇವರು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಬೆಂಗಳೂರು ರವರನ್ನು ಕೋರಿರುತ್ತಾರೆ.

3. ಪ್ರಕರಣಕ್ಕೆ ಸಂಬಂಧಿಸಿದ ಸರ್ಕಾರಿ ಪರ ಸಾಕ್ಷಿಗಳಾದ ಶ್ರೀ.ಡಿ.ಸಿ.ನಾರಾಯಣಮೂರ್ತಿ ಬಿನ್ ಎನ್.ಚನ್ನಕೇಶವಯ್ಯ, ಉಪ ವಲಯ ಅರಣ್ಯಾಧಿಕಾರಿ (ಅಂದಿನ ವಲಯ ಅರಣ್ಯಾಧಿಕಾರಿ) ಇವರ ಮುಖ್ಯ ವಿಚಾರಣೆಯನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಬೆಂಗಳೂರು ರವರ ಸಮಕ್ಷಮ ಸಹಾಯಕ ಸರ್ಕಾರಿ ಅಭಿಯೋಜಕರು ಪಡೆದಿರುತ್ತಾರೆ.

4. ಹಾಜರಿದ್ದ ಸರ್ಕಾರಿ ಸಾಕ್ಷಿಗಳು ನೀಡಿರುವ ಹೇಳಿಕೆಗಳನ್ನು ಪರಿಶೀಲಿಸಲಾಗಿ, ದಿನಾಂಕ:01–11–1993 ರಂದು ಬೆಂಗಳೂರು ನಗರ, ಶೇಷಾದ್ರಿಪುರಂನ ರಸಲ್ದಾರ್ ಸ್ಟ್ರೀಟ್ ರಸ್ತೆಯಲ್ಲಿರುವ ನಂ.105ರ ಮನೆ ಮೇಲೆ ದಾಳಿ ಮಾಡಿದ ಸಂದರ್ಭದಲ್ಲಿ ಸದರಿ ಮನೆಯಲ್ಲಿ ಯಾವುದೇ ಪರವಾನಿಗೆ ಇಲ್ಲದೇ ಅಕ್ರಮವಾಗಿ 15.5 ಕೆ.ಜಿ ಶ್ರೀಗಂಧದ ಬೇರು ಮತ್ತು ಕಾಂಡಗಳನ್ನು ಶೇಖರಿಸಿಟ್ಟಿರುವುದು. ಮನೆಯ ಮಾಲೀಕರಾದ ಪ್ಯಾರೇಜಾನ್ ಬಿನ್ ಲೇಟ್.ಅಬ್ದುಲ್ ಸತ್ತಾರ್ ಎಂಬುವವರು ಪರಾರಿಯಾದ ಕಾರಣ ಸ್ಥಳೀಯರ ಸಮಕ್ಷಮ ಪಂಚನಾಮೆಯ ಸಹಿತ ಶ್ರೀಗಂಧವನ್ನು ಅಮಾನತ್ತುಪಡಿಸಿಕೊಂಡಿರುವ ಬಗ್ಗೆ ಸಾಕ್ಷ್ಯಾ ನೀಡಿರುತ್ತಾರೆ. ಅಲ್ಲದೇ ಸರ್ಕಾರಿ ಸಾಕ್ಷಿಗಳು ಪಂಚನಾಮೆಯಲ್ಲಿರುವ ಸಹಿಯನ್ನು ಗುರುತಿಸಿರುತ್ತಾರೆ. ಪ್ರಕರಣದಲ್ಲಿ 15.5 ಕೆ.ಜಿ ಶ್ರೀಗಂಧವನ್ನು ಅಕ್ರಮವಾಗಿ ದಾಸ್ತಾನು ಮಾಡಿರುವ ಬಗ್ಗೆ ಸಾಕ್ಷಿ ನೀಡಿರುವುದರಿಂದ ಹೆಚ್ಚಿನ ವಿಚಾರಣೆ ಅವಶ್ಯಕತೆ ಇಲ್ಲವೆಂದು ಸರ್ಕಾರಿ ವಕೀಲರು ವಾದವನ್ನು ಮಂಡಿಸಿರುತ್ತಾರೆ.

5. ಸರ್ಕಾರಿ ಸಾಕ್ಷಿಗಳು ನೀಡಿರುವ ಹೇಳಿಕೆಗಳು ಮತ್ತು ಪ್ರಕರಣದಲ್ಲಿ ಲಭ್ಯವಿರುವ ದಾಖಲೆಗಳನ್ನು ಆಧರಿಸಿ ಸರ್ಕಾರಿ ವಕೀಲರು ವಾದವನ್ನು ಮಂಡಿಸಿರುತ್ತಾರೆ. ಸರ್ಕಾರಿ ವಕೀಲರ ವಾದ ಹಾಗೂ ಹಾಜರುಪಡಿಸಿರುವ ದಾಖಲೆಗಳನ್ನು ಪರಿಶೀಲಿಸಲಾಯಿತು. ಪ್ರತಿವಾದಿಗಳು ಹಾಜರಿರದ ಕಾರಣ, ಅವರ ವಿಳಾಸ ಪತ್ತೆಯಾಗದ ಕಾರಣ, ನನ್ನ ಎದುರಿನಲ್ಲಿ ಹಾಜರುಪಡಿಸಿರುವ ದಾಖಲೆಗಳ ಆದಾರದ ಮೇಲೆ ತೀರ್ಮಾನವನ್ನು ಕೈಗೊಳ್ಳಬೇಕಾಗಿರುತ್ತದೆ. ತೀರ್ಮಾನವನ್ನು ಕೈಗೊಳ್ಳಲು ಈ ಕೆಳಕಂಡ ಅಂಶಗಳನ್ನು ಪರಿಗಣಿಸಬೇಕಾಗಿದೆ.

6(1) ಸದರಿ ಪ್ರಕರಣದಲ್ಲಿ ಅಮಾನತ್ತುಪಡಿಸಿಕೊಳ್ಳಲಾಗಿರುವ ಒಟ್ಟು 15.5 ಕೆ.ಜಿ ಶ್ರೀಗಂಧವನ್ನು ಅಕ್ರಮವಾಗಿ ದಾಸ್ತಾನು ಮಾಡಿರುವುದು ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 87ರ ಉಲ್ಲಂಘನೆಯಾಗಿದೆಯೇ?

6(2) ಸದರಿ ಪ್ರಕರಣದಲ್ಲಿ ಅಮಾನತ್ತುಪಡಿಸಿಕೊಳ್ಳಲಾಗಿರುವ ಒಟ್ಟು 15.5 ಕೆ.ಜಿ ಶ್ರೀಗಂಧವನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆಯೇ?

6(3) ಮೇಲಿನ ಅಂಶಗಳಿಗೆ ಅನುಗುಣವಾಗಿ ಯಾವ ಆದೇಶ?
ಮೇಲಿನ ಅಂಶಗಳಿಗೆ ನನ್ನ ಉತ್ತರ ಈ ಕೆಳಕಂಡಂತೆ ಇರುತ್ತದೆ.

6(4) ಮೊದಲನೇ ಅಂಶಕ್ಕೆ ನನ್ನ ಉತ್ತರ ಅಹುದು ಎಂಬುದಾಗಿರುತ್ತದೆ.

6(5) ಎರಡನೇ ಅಂಶಕ್ಕೆ ನನ್ನ ಉತ್ತರ ಅಹುದು ಎಂಬುದಾಗಿರುತ್ತದೆ.

6(6) ಅಂತಿಮ ಆದೇಶವನ್ನು ಈ ಕೆಳಕಂಡ ಕಾರಣಗಳಿಗೆ ನೀಡಲಾಗಿದೆ.

7. ದಿನಾಂಕ:01–11–1993 ರಂದು ಬೆಂಗಳೂರು ನಗರ, ಶೇಷಾದ್ರಿಪುರಂನ ರಸಲ್ದಾರ್ ಸ್ಟ್ರೀಟ್ ರಸ್ತೆಯಲ್ಲಿರುವ ನಂ.105ರ ಮನೆಯಲ್ಲಿ ಸೂಕ್ತ ಪರವಾನಿಗೆ ಇಲ್ಲದೇ 15.5 ಕೆ.ಜಿ ಶ್ರೀಗಂಧದ ಬೇರು ಹಾಗೂ ಕಾಂಡಗಳನ್ನು ಅಕ್ರಮವಾಗಿ ದಾಸ್ತಾನು ಮಾಡಿರುವುದು ಕರ್ನಾಟಕ ಅರಣ್ಯ ಕಾಯ್ದೆ 1963 ರ ಸೆಕ್ಷನ್ 87ರ ಉಲ್ಲಂಘನೆಯಾಗಿರುತ್ತದೆ. ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 84ರ ಮೇರೆಗೆ ಶ್ರೀಗಂಧವು ರಾಜ್ಯ ಸರ್ಕಾರದ ಸ್ವತ್ತಾಗಿದ್ದು, ಅದರ ಮಾಲೀಕತ್ವವು ಸಾಬೀತಾಗುವವರೆಗೆ ರಾಜ್ಯ ಸರ್ಕಾರದ ಸ್ವತ್ತೆಂದು ಪರಿಗಣಿಸಬೇಕಾಗಿರುತ್ತದೆ. ಅರಣ್ಯ ಸಿಬ್ಬಂದಿಯು ದಾಖಲಿಸಿರುವ ಮೊಕದ್ದಮೆಯು ಅರಣ್ಯ ಕಾಯ್ದೆಯ ವ್ಯಾಪ್ತಿಯಲ್ಲಿ ಸರಿ ಇರುತ್ತದೆ. ಸರ್ಕಾರಿ ಪರ ಸಾಕ್ಷಿಗಳು ಸಹ ಸದರಿ ಶ್ರೀಗಂಧವನ್ನು ಅಕ್ರಮವಾಗಿ ದಾಸ್ತಾನು ಮಾಡಿರುವುದನ್ನು ವಿಚಾರಣಾ ಸಮಯದಲ್ಲಿ ಹೇಳಿಕೆ ನೀಡಿರುತ್ತಾರೆ. ಆರೋಪಿಯು ತಲೆಮರೆಸಿಕೊಂಡಿರುವ ಕಾರಣ, ಶ್ರೀಗಂಧವನ್ನು ಅಕ್ರಮವಾಗಿ ದಾಸ್ತಾನು ಮಾಡಿರುವುದು ಸ್ಪಷ್ಟವಾಗಿರುತ್ತದೆ. ಆದುದರಿಂದ ಒಟ್ಟು 15.5 ಕೆ.ಜಿ ಶ್ರೀಗಂಧವನ್ನು ಕರ್ನಾಟಕ ಅರಣ್ಯ ಕಾಯ್ದೆ 1963 ರ ಸೆಕ್ಷನ್ 84ರ ಮೇರೆಗೆ ಸರ್ಕಾರಿ ಸ್ವತ್ತಾಗಿದ್ದು, ಸೆಕ್ಷನ್ 87ರ ಉಲ್ಲಂಘನೆ ಆಗಿರುವುದು ಖಾತರಿಯಾಗಿರುತ್ತದೆ.

8. ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71ಎ ಮೇರೆಗೆ ಸದರಿ ಪ್ರಕರಣದಲ್ಲಿ ಅಮಾನತ್ತುಪಡಿಸಿಕೊಂಡಿರುವ ಸರ್ಕಾರ ಸ್ವತ್ತಾದ 15.5 ಕೆ.ಜಿ ಶ್ರೀಗಂಧವನ್ನು ಅಧಿಕೃತ ಅಧಿಕಾರಿಯ ಮುಂದೆ ಹಾಜರುಪಡಿಸಿರುವುದರಿಂದ ಅಂತಹ ಸ್ವತ್ತನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಅವಕಾಶವಿರುವುದರಿಂದ ಸದರಿ ಶ್ರೀಗಂಧವನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿರುತ್ತದೆ.

**ಆದೇಶ**

ನಾನು ಕೆ.ಬಿ.ಮಂಜುನಾಥ, ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಬೆಂಗಳೂರು ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71ಎ ರ ಮೇರೆಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಅರಣ್ಯ ಅಪರಾಧ ಮೊಕದ್ದಮೆ ಸಂಖ್ಯೆ:270/1993–94ರಲ್ಲಿ ಅಮಾನತ್ತು–ಪಡಿಸಿಕೊಂಡಿರುವ ಒಟ್ಟು 15.5 ಕೆ.ಜಿ ಶ್ರೀಗಂಧದ ಬೇರು ಮತ್ತು ಕಾಂಡಗಳನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಈ ಮೂಲಕ ಆದೇಶಿಸುತ್ತೇನೆ.

ಈ ಆದೇಶವನ್ನು ಬೆರಳಚ್ಚುಗಾರರಿಗೆ ಉತ್ತಲೇಖನ ಕೊಟ್ಟಿದ್ದು, ಅವರು ಬೆರಳಚ್ಚಿಸಿದ ನಂತರ ತಿದ್ದುಪಡಿ ಮಾಡಿ ಈ ದಿನ ದಿನಾಂಕ:27–03–2012ರಂದು ತೆರೆದ ನ್ಯಾಯಾಲಯದಲ್ಲಿ ಘೋಷಿಸಲಾಗಿದೆ.

ಈ ಆದೇಶವು ರಾಜ್ಯಪತ್ರದಲ್ಲಿ ಪ್ರಕಟಗೊಂಡ 30 ದಿವಸಗಳ ನಂತರ ಜಾರಿಗೆ ಬರುತ್ತದೆ.

**ಕೆ.ಬಿ.ಮಂಜುನಾಥ**
ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಅರಣ್ಯ ಸಂಚಾರಿ ದಳ, ಬೆಂಗಳೂರು.

## ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಅರಣ್ಯ ಸಂಚಾರಿ ದಳ, ಬೆಂಗಳೂರು ರವರ ನ್ಯಾಯಾಲಯ.

**ಎಫ್.ಓ.ಸಿ ಸಂಖ್ಯೆ: 56/1997–98 ದಿನಾಂಕ:12/07/1997.**

**ಸಂಖ್ಯೆ:ಎ1.ಅಅಪ್ರ.71A.56/1997–98, ದಿನಾಂಕ:27/03/2012**

| | | |
|---|---|---|
| **ಉಪಸ್ಥಿತರು** | : | ಶ್ರೀ.ಕೆ.ಬಿ.ಮಂಜುನಾಥ, ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಬೆಂಗಳೂರು. |
| **ಫಿರ್ಯಾದಿ** | : | ವಲಯ ಅರಣ್ಯಾಧಿಕಾರಿ, ಅರಣ್ಯ ಸಂಚಾರಿ ದಳ, ಬೆಂಗಳೂರು. |
| **ಅರ್ಜಿದಾರರು ಆರೋಪಿಗಳು** | : | ಪತ್ತೆಯಾಗಿರುವುದಿಲ್ಲ. |

**ಪ್ರಕರಣದ ಮುಖ್ಯಾಂಶಗಳು:**

1. ದಿನಾಂಕ:12–07–1997ರಂದು ಬೆಳಿಗ್ಗೆ 10.00 ಗಂಟೆಯ ಸಮಯದಲ್ಲಿ ಖಚಿತ ಮಾಹಿತಿಯ ಮೇರೆಗೆ ಅರಣ್ಯ ಸಂಚಾರಿ ದಳದ ಸಿಬ್ಬಂದಿ, ಪೊಲೀಸ್ ಇಲಾಖೆ ಸಿಬ್ಬಂದಿ ಹಾಗೂ ಅಬಕಾರಿ ಇಲಾಖೆ ಸಿಬ್ಬಂದಿಗಳು ಬೆಂಗಳೂರು ಗ್ರಾಮಾಂತರ ಜಿಲ್ಲೆ, ಹೊಸಕೋಟೆ ತಾಲ್ಲೂಕು, ಕಟ್ಟಿಗೇನಹಳ್ಳಿ ಗ್ರಾಮದ ಅಂಗಡಿ ಬಾಷಾ ಸಾಬ್ ಇವರ ಮಗನಾದ ಸಾಸಿಕ್ ಖಾನ್ ಇವರ ಮನೆಯ ಮೇಲೆ ದಾಳಿ ಮಾಡಲಾಗಿ, ಸದರಿ ಮನೆಯಲ್ಲಿ ಶ್ರೀಗಂಧದ ಮರದ ತುಂಡು ಹಾಗೂ ಬೇರುಗಳು ಇರುವುದು ಕಂಡುಬಂದಿರುತ್ತದೆ. ಇದನ್ನು ತೂಕ ಮಾಡಲಾಗಿ, ಒಟ್ಟು 165 ಇರುತ್ತದೆ. ಮನೆ ಮೇಲೆ ದಾಳಿ ಮಾಡಿದ ವೇಳೆಯಲ್ಲಿ ಸದರಿ ಮನೆಯಲ್ಲಿ ಯಾರೂ ಸಹ ವಾಸಿಸದೇ ಇದ್ದ ಕಾರಣ, ಮನೆ ಮಾಲೀಕರ ವಿಳಾಸವನ್ನು ಅಕ್ಕಪಕ್ಕದವರ ಬಳಿ ಕೇಳಲಾಗಿ, ಅಂಗಡಿ ಬಾಷಾ ಸಾಬ್ ಇವರ ಮಗನಾದ ಸಾಸಿಕ್ ಖಾನ್, ಕಟ್ಟಿಗೇನಹಳ್ಳಿ ಎಂಬುದಾಗಿ ತಿಳಿದುಬಂದಿರುತ್ತದೆ. ಶ್ರೀಗಂಧವು ಸರ್ಕಾರಿ ಸ್ವತ್ತಾಗಿದ್ದು, ಅದನ್ನು ಅಕ್ರಮವಾಗಿ ಮನೆಯಲ್ಲಿ ಸಂಗ್ರಹಿಸಿದ್ದ ಆಸಾಮಿಯು ಇಲಾಖಾ ಸಿಬ್ಬಂದಿಗಳನ್ನು ಕಂಡು ತಲೆಮರೆಸಿಕೊಂಡಿರುತ್ತಾರೆ. ಸೂಕ್ತ ಪರವಾನಿಗೆ ಇಲ್ಲದೇ ಅಕ್ರಮವಾಗಿ ಶ್ರೀಗಂಧವನ್ನು ದಾಸ್ತಾನು ಮಾಡಿರುವುದು ಕರ್ನಾಟಕ ಅರಣ್ಯ ಕಾಯ್ದೆ 1963 ಹಾಗೂ ಕರ್ನಾಟಕ ಅರಣ್ಯ ಅಧಿನಿಯಮ 1969 ಉಲ್ಲಂಘನೆಯಾಗಿರುವುದರಿಂದ ಸದರಿ ಮನೆಯಲ್ಲಿದ್ದ ಒಟ್ಟು 165 ಕೆ.ಜಿ ಶ್ರೀಗಂಧದ ಮರದ ತುಂಡು ಹಾಗೂ ಬೇರುಗಳನ್ನು ಪಂಚನಾಮೆಯ ಸಹಿತ ಸರ್ಕಾರದ ಪರ ಅಮಾನತ್ತುಪಡಿಸಿಕೊಂಡು ಅರಣ್ಯ ಅಪರಾಧ ಮೊಕದ್ದಮೆ ದಾಖಲಿಸಿರುತ್ತಾರೆ. ಹೆಚ್ಚಿನ ತನಿಖೆಗಾಗಿ ಒಟ್ಟು 165 ಕೆ.ಜಿ ಶ್ರೀಗಂಧವನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಅರಣ್ಯ ಸಂಚಾರಿ ದಳ, ಬೆಂಗಳೂರು ರವರ ಸಮಕ್ಷಮ ಹಾಜರುಪಡಿಸಿರುತ್ತಾರೆ. ಜಪ್ತು ಮಾಡಲಾದ ಮುದ್ದೆಮಾಲನ್ನು ಸುರಕ್ಷತೆಗಾಗಿ ಅರಣ್ಯ ಸಂಚಾರಿ ದಳದ ದಾಸ್ತಾನು ಮಳಿಗೆಯಲ್ಲಿ ಇಡಲಾಗಿರುತ್ತದೆ.

2. ಸೂಕ್ತ ಪರವಾನಿಗೆ ಇಲ್ಲದೇ ಅಕ್ರಮವಾಗಿ ಶ್ರೀಗಂಧವನ್ನು ದಾಸ್ತಾನು ಮಾಡಿರುವುದು ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 87ರ ಉಲ್ಲಂಘನೆಯಾಗಿದ್ದು, ಸದರಿ ಕಾಯ್ದೆಯ ಸೆಕ್ಷನ್ 71ಎ ರಡಿಯಲ್ಲಿ ಕ್ರಮ ಜರುಗಿಸಲು ಅಮಾನತ್ತುಪಡಿಸಿಕೊಂಡಿರುವ 165 ಕೆ.ಜಿ ಶ್ರೀಗಂಧವನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಕ್ರಮ ಜರುಗಿಸುವಂತೆ ವಲಯ ಅರಣ್ಯಾಧಿಕಾರಿಗಳು, ಅರಣ್ಯ ಸಂಚಾರಿ ದಳ, ಬೆಂಗಳೂರು ಇವರು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಬೆಂಗಳೂರು ರವರನ್ನು ಕೋರಿರುತ್ತಾರೆ.

3. ಪ್ರಕರಣಕ್ಕೆ ಸಂಬಂಧಿಸಿದ ಸರ್ಕಾರಿ ಪರ ಸಾಕ್ಷಿಗಳಾದ ಶ್ರೀ.ಎಂ.ಮಹದೇವಯ್ಯ ಬಿನ್ ಲೇಟ್.ಟಿ.ಎಂ.ಮಲ್ಲಯ್ಯ, ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ (ಅಂದಿನ ವಲಯ ಅರಣ್ಯಾಧಿಕಾರಿ), ಶ್ರೀ.ಕೆ.ವಿ.ಶ್ರೀನಿವಾಸಪ್ಪ ಬಿನ್ ಲೇಟ್.ವರದಪ್ಪ, ವಲಯ ಅರಣ್ಯಾಧಿಕಾರಿ, ಶ್ರೀ.ವೆಂಕಟರಾಜು ಬಿನ್ ಲೇಟ್.ಗೋರಪ್ಪ, ವಲಯ ಅರಣ್ಯಾಧಿಕಾರಿ (ಅಂದಿನ ವನಪಾಲಕ) ಹಾಗೂ ಶ್ರೀ.ಹೆಚ್.ವೀರಪ್ಪ ಬಿನ್ ಹುಚ್ಚಹನುಮಯ್ಯ, ಉಪ ವಲಯ ಅರಣ್ಯಾಧಿಕಾರಿ (ಅಂದಿನ ಅರಣ್ಯ ರಕ್ಷಕ) ಇವರುಗಳ ಮುಖ್ಯ ವಿಚಾರಣೆಯನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಬೆಂಗಳೂರು ರವರ ಸಮಕ್ಷಮ ಸಹಾಯಕ ಸರ್ಕಾರಿ ಅಭಿಯೋಜಕರು ಪಡೆದಿರುತ್ತಾರೆ.

4. ಹಾಜರಿದ್ದ ಸರ್ಕಾರಿ ಸಾಕ್ಷಿಗಳು ನೀಡಿರುವ ಹೇಳಿಕೆಗಳನ್ನು ಪರಿಶೀಲಿಸಲಾಗಿ, ದಿನಾಂಕ:12–07–1997 ರಂದು ಅರಣ್ಯ ಸಂಚಾರಿ ದಳದ ಸಿಬ್ಬಂದಿ, ಪೊಲೀಸ್ ಇಲಾಖೆ ಸಿಬ್ಬಂದಿ ಹಾಗೂ ಅಬಕಾರಿ ಇಲಾಖೆ ಸಿಬ್ಬಂದಿ ಬೆಂಗಳೂರು ಗ್ರಾಮಾಂತರ ಜಿಲ್ಲೆ, ಹೊಸಕೋಟೆ ತಾಲ್ಲೂಕು,

ಕಟ್ಟಿಗೇನಹಳ್ಳಿ ಗ್ರಾಮದ ಅಂಗಡಿ ಬಾಷಾ ಸಾಬ್ ಇವರ ಮಗನಾದ ನಾಸಿಕ್ ಖಾನ್ ಇವರ ಮನೆಯ ಮೇಲೆ ದಾಳಿ ಮಾಡಿದಾಗ ಸದರಿ ಮನೆಯಲ್ಲಿ ಅಕ್ರಮವಾಗಿ ಶ್ರೀಗಂಧದ ಮರದ ತುಂಡು ಹಾಗೂ ಬೇರುಗಳನ್ನು ದಾಸ್ತಾನು ಮಾಡಿರುವುದು. ಶ್ರೀಗಂಧವು ಸರ್ಕಾರಿ ಸ್ವತ್ತಾಗಿದ್ದು, ಇಲಾಖೆಯವರನ್ನು ಕಂಡು ಆರೋಪಿ ತಲೆಮರೆಸಿಕೊಂಡಿರುವುದು ಹಾಗೂ ನ್ಯಾಯಾಲಯದಿಂದ ತಪಾಸಣೆಗೆ ಅನುಮತಿ ಪಡೆಯಲು ಕಾಲಾವಕಾಶ ಇಲ್ಲದೇ ಇದ್ದುದರಿಂದ ಸ್ಥಳೀಯರ ಸಮಕ್ಷಮ ಪಂಚನಾಮೆಯ ಸಹಿತ ಶ್ರೀಗಂಧವನ್ನು ಅಮಾನತ್ತುಪಡಿಸಿಕೊಂಡಿರುವ ಬಗ್ಗೆ ಸಾಕ್ಷ್ಯ ನೀಡಿರುತ್ತಾರೆ. ಅಲ್ಲದೇ ಸರ್ಕಾರಿ ಸಾಕ್ಷಿಗಳು ಪಂಚನಾಮೆಯಲ್ಲಿರುವ ಸಹಿಯನ್ನು ಗುರುತಿಸಿರುತ್ತಾರೆ. ಪ್ರಕರಣದಲ್ಲಿ 165 ಕೆ.ಜಿ ಶ್ರೀಗಂಧವನ್ನು ಅಕ್ರಮವಾಗಿ ದಾಸ್ತಾನು ಮಾಡಿರುವ ಬಗ್ಗೆ ಸಾಕ್ಷಿ ನೀಡಿರುವುದರಿಂದ ಹೆಚ್ಚಿನ ವಿಚಾರಣೆ ಅವಶ್ಯಕತೆ ಇಲ್ಲವೆಂದು ಸರ್ಕಾರಿ ವಕೀಲರು ವಾದವನ್ನು ಮಂಡಿಸಿರುತ್ತಾರೆ.

5. ಸರ್ಕಾರಿ ಸಾಕ್ಷಿಗಳು ನೀಡಿರುವ ಹೇಳಿಕೆಗಳು ಮತ್ತು ಪ್ರಕರಣದಲ್ಲಿ ಲಭ್ಯವಿರುವ ದಾಖಲೆಗಳನ್ನು ಆಧರಿಸಿ ಸರ್ಕಾರಿ ವಕೀಲರು ವಾದವನ್ನು ಮಂಡಿಸಿರುತ್ತಾರೆ. ಸರ್ಕಾರಿ ವಕೀಲರ ವಾದ ಹಾಗೂ ಹಾಜರುಪಡಿಸಿರುವ ದಾಖಲೆಗಳನ್ನು ಪರಿಶೀಲಿಸಲಾಯಿತು. ಪ್ರತಿವಾದಿಗಳು ಹಾಜರಿರದ ಕಾರಣ, ಅವರ ವಿಳಾಸ ಪತ್ತೆಯಾಗದ ಕಾರಣ, ನನ್ನ ಎದುರಿನಲ್ಲಿ ಹಾಜರುಪಡಿಸಿರುವ ದಾಖಲೆಗಳ ಆದಾರದ ಮೇಲೆ ತೀರ್ಮಾನವನ್ನು ಕೈಗೊಳ್ಳಬೇಕಾಗಿರುತ್ತದೆ. ತೀರ್ಮಾನವನ್ನು ಕೈಗೊಳ್ಳಲು ಈ ಕೆಳಕಂಡ ಅಂಶಗಳನ್ನು ಪರಿಗಣಿಸಬೇಕಾಗಿದೆ.

7(1) ಸದರಿ ಪ್ರಕರಣದಲ್ಲಿ ಅಮಾನತ್ತುಪಡಿಸಿಕೊಳ್ಳಲಾಗಿರುವ ಒಟ್ಟು 165 ಕೆ.ಜಿ ಶ್ರೀಗಂಧವನ್ನು ಅಕ್ರಮವಾಗಿ ದಾಸ್ತಾನು ಮಾಡಿರುವುದು ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 87ರ ಉಲ್ಲಂಘನೆಯಾಗಿದೆಯೇ?

7(2) ಸದರಿ ಪ್ರಕರಣದಲ್ಲಿ ಅಮಾನತ್ತುಪಡಿಸಿಕೊಳ್ಳಲಾಗಿರುವ ಒಟ್ಟು 165 ಕೆ.ಜಿ ಶ್ರೀಗಂಧವನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆಯೇ?

7(3) ಮೇಲಿನ ಅಂಶಗಳಿಗೆ ಅನುಗುಣವಾಗಿ ಯಾವ ಆದೇಶ?
ಮೇಲಿನ ಅಂಶಗಳಿಗೆ ನನ್ನ ಉತ್ತರ ಈ ಕೆಳಕಂಡಂತೆ ಇರುತ್ತದೆ.

7(4) ಮೊದಲನೇ ಅಂಶಕ್ಕೆ ನನ್ನ ಉತ್ತರ ಅಹುದು ಎಂಬುದಾಗಿರುತ್ತದೆ.

7(5) ಎರಡನೇ ಅಂಶಕ್ಕೆ ನನ್ನ ಉತ್ತರ ಅಹುದು ಎಂಬುದಾಗಿರುತ್ತದೆ.

7(6) ಅಂತಿಮ ಆದೇಶವನ್ನು ಈ ಕೆಳಕಂಡ ಕಾರಣಗಳಿಗೆ ನೀಡಲಾಗಿದೆ.

8. ದಿನಾಂಕ:12–07–1997ರಂದು ಅರಣ್ಯ ಸಂಚಾರಿ ದಳದ ಸಿಬ್ಬಂದಿ, ಪೊಲೀಸ್ ಇಲಾಖೆ ಸಿಬ್ಬಂದಿ ಹಾಗೂ ಅಬಕಾರಿ ಇಲಾಖೆ ಸಿಬ್ಬಂದಿ ಬೆಂಗಳೂರು ಗ್ರಾಮಾಂತರ ಜಿಲ್ಲೆ, ಹೊಸಕೋಟೆ ತಾಲ್ಲೂಕು, ಕಟ್ಟಿಗೇನಹಳ್ಳಿ ಗ್ರಾಮದ ಅಂಗಡಿ ಬಾಷಾ ಸಾಬ್ ಇವರ ಮಗನಾದ ನಾಸಿಕ್ ಖಾನ್ ಇವರ ಮನೆಯ ಮೇಲೆ ದಾಳಿ ಮಾಡಿದಾಗ ಸದರಿ ಮನೆಯಲ್ಲಿ ಸೂಕ್ತ ಪರವಾನಿಗೆ ಇಲ್ಲದೇ ಶ್ರೀಗಂಧದ ಮರದ ತುಂಡು ಹಾಗೂ ಬೇರುಗಳನ್ನು ಅಕ್ರಮವಾಗಿ ದಾಸ್ತಾನು ಮಾಡಿರುವುದು ಕರ್ನಾಟಕ ಅರಣ್ಯ ಕಾಯ್ದೆ 1963 ರ ಸೆಕ್ಷನ್ 87ರ ಉಲ್ಲಂಘನೆಯಾಗಿರುತ್ತದೆ. ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 84ರ ಮೇರೆಗೆ ಶ್ರೀಗಂಧವು ರಾಜ್ಯ ಸರ್ಕಾರದ ಸ್ವತ್ತಾಗಿದ್ದು, ಅದರ ಮಾಲೀಕತ್ವವು ಸಾಬೀತಾಗುವವರೆಗೆ ರಾಜ್ಯ ಸರ್ಕಾರದ ಸ್ವತ್ತೆಂದು ಪರಿಗಣಿಸಬೇಕಾಗಿರುತ್ತದೆ. ಅರಣ್ಯ ಸಿಬ್ಬಂದಿಯು ದಾಖಲಿಸಿರುವ ಮೊಕದ್ದಮೆಯು ಅರಣ್ಯ ಕಾಯ್ದೆಯ ವ್ಯಾಪ್ತಿಯಲ್ಲಿ ಸರಿ ಇರುತ್ತದೆ. ಸರ್ಕಾರಿ ಪರ ಸಾಕ್ಷಿಗಳು ಸಹ ಸದರಿ ಶ್ರೀಗಂಧವನ್ನು ಅಕ್ರಮವಾಗಿ ದಾಸ್ತಾನು ಮಾಡಿರುವುದನ್ನು ವಿಚಾರಣಾ ಸಮಯದಲ್ಲಿ ಹೇಳಿಕೆ ನೀಡಿರುತ್ತಾರೆ. ಆರೋಪಿಯು ತಲೆಮರೆಸಿಕೊಂಡಿರುವ ಕಾರಣ, ಶ್ರೀಗಂಧವನ್ನು ಅಕ್ರಮವಾಗಿ ದಾಸ್ತಾನು ಮಾಡಿರುವುದು ಸ್ಪಷ್ಟವಾಗಿರುತ್ತದೆ. ಆದುದರಿಂದ ಒಟ್ಟು 165 ಕೆ.ಜಿ ಶ್ರೀಗಂಧವನ್ನು ಕರ್ನಾಟಕ ಅರಣ್ಯ ಕಾಯ್ದೆ 1963 ರ ಸೆಕ್ಷನ್ 84ರ ಮೇರೆಗೆ ಸರ್ಕಾರಿ ಸ್ವತ್ತಾಗಿದ್ದು, ಸೆಕ್ಷನ್ 87ರ ಉಲ್ಲಂಘನೆ ಆಗಿರುವುದು ಖಾತರಿಯಾಗಿರುತ್ತದೆ.

9. ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71ಎ ಮೇರೆಗೆ ಸದರಿ ಪ್ರಕರಣದಲ್ಲಿ ಅಮಾನತ್ತುಪಡಿಸಿಕೊಂಡಿರುವ ಸರ್ಕಾರ ಸ್ವತ್ತಾದ 165 ಕೆ.ಜಿ ಶ್ರೀಗಂಧವನ್ನು ಅಧಿಕೃತ ಅಧಿಕಾರಿಯ ಮುಂದೆ ಹಾಜರುಪಡಿಸಿರುವುದರಿಂದ ಅಂತಹ ಸ್ವತ್ತನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಅವಕಾಶವಿರುವುದರಿಂದ ಸದರಿ ಶ್ರೀಗಂಧವನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿರುತ್ತದೆ.

**ಆದೇಶ**

ನಾನು ಕೆ.ಬಿ.ಮಂಜುನಾಥ, ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಬೆಂಗಳೂರು ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71ಎ ರ ಮೇರೆಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಅರಣ್ಯ ಅಪರಾಧ ಮೊಕದ್ದಮೆ ಸಂಖ್ಯೆ:56/1997–98ರಲ್ಲಿ ಅಮಾನತ್ತು–ಪಡಿಸಿಕೊಂಡಿರುವ ಒಟ್ಟು 165 ಕೆ.ಜಿ ಶ್ರೀಗಂಧದ ಮರದ ತುಂಡುಗಳು ಹಾಗೂ ಬೇರುಗಳನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಈ ಮೂಲಕ ಆದೇಶಿಸುತ್ತೇನೆ.

ಈ ಆದೇಶವನ್ನು ಬೆರಳಚ್ಚುಗಾರರಿಗೆ ಉತ್ತಲೇಖನ ಕೊಟ್ಟಿದ್ದು, ಅವರು ಬೆರಳಚ್ಚಿಸಿದ ನಂತರ ತಿದ್ದುಪಡಿ ಮಾಡಿ ಈ ದಿನ ದಿನಾಂಕ:27-03-2012ರಂದು ತೆರೆದ ನ್ಯಾಯಾಲಯದಲ್ಲಿ ಘೋಷಿಸಲಾಗಿದೆ.

ಈ ಆದೇಶವು ರಾಜ್ಯಪತ್ರದಲ್ಲಿ ಪ್ರಕಟಗೊಂಡ 30 ದಿವಸಗಳ ನಂತರ ಜಾರಿಗೆ ಬರುತ್ತದೆ.

**ಕೆ.ಬಿ.ಮಂಜುನಾಥ**
ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಅರಣ್ಯ ಸಂಚಾರಿ ದಳ, ಬೆಂಗಳೂರು.

## ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಅರಣ್ಯ ಸಂಚಾರಿ ದಳ, ಬೆಂಗಳೂರು ರವರ ನ್ಯಾಯಾಲಯ.

**ಎಫ್.ಓ.ಸಿ ಸಂಖ್ಯೆ: 200/1997-98 ದಿನಾಂಕ:08/02/1998.**

**ಸಂಖ್ಯೆ:ಎ1.ಅಅಪ್ರ.71A.200/1997-98, ದಿನಾಂಕ:27/03/2012**

**ಉಪಸ್ಥಿತರು** : ಶ್ರೀ.ಕೆ.ಬಿ.ಮಂಜುನಾಥ, ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಬೆಂಗಳೂರು.

**ಪಿರ್ಯಾದಿ** : ವಲಯ ಅರಣ್ಯಾಧಿಕಾರಿ, ಅರಣ್ಯ ಸಂಚಾರಿ ದಳ, ಬೆಂಗಳೂರು.

**ಅರ್ಜಿದಾರರು ಆರೋಪಿಗಳು** : ಕೆ.ವೇಲು ಬಿನ್ ಕೃಷ್ಣನ್, ನಂ.62, 7ನೇ ಅಡ್ಡರಸ್ತೆ, ಮುದ್ದಪ್ಪ ಗಾರ್ಡನ್, ದಯಾನಂದನಗರ, ಶ್ರೀರಾಂಪುರಂ, ಬೆಂಗಳೂರು-21. (ಬಂಧಿಸಿ ನ್ಯಾಯಾಲಯಕ್ಕೆ ಒಪ್ಪಿಸಿದೆ).

**ಪ್ರಕರಣದ ಮುಖ್ಯಾಂಶಗಳು:**

1. ದಿನಾಂಕ:08-02-1998ರಂದು ಬೆಂಗಳೂರು ನಗರ, ಬಾಗಲಗುಂಟೆ ಗ್ರಾಮದ ಸರ್ವೆ ನಂ.111ರಲ್ಲಿ ಪರಿವರ್ತನೆ ಮಾಡಿರುವ ಲೇಔಟ್‌ನ ಸೈಟ್ ನಂ.17ರಲ್ಲಿ ಕಟ್ಟಿದ್ದ ಸಿಮೆಂಟ್ ಗೋಡಾನಿನಲ್ಲಿ ಅಕ್ರಮವಾಗಿ ಬೀಟೆ ಮರದ ನಾಟಾಗಳನ್ನು ದಾಸ್ತಾನು ಮಾಡಿರುವ ಬಗ್ಗೆ ದೂರವಾಣಿ ಮುಖಾಂತರ ಬಂದ ಖಚಿತ ಮಾಹಿತಿಯ ಮೇಲೆ ಜಾಗೃತ ದಳದ ಸಿಬ್ಬಂದಿಗಳು ಹಾಗೂ ಅರಣ್ಯ ಸಂಚಾರಿ ದಳದ ಸಿಬ್ಬಂದಿಗಳು ಸದರಿ ಸ್ಥಳಕ್ಕೆ ಬೇಟಿ ನೀಡಿ ಪರಿಶೀಲಿಸಲಾಗಿ, ಹೆಸರಘಟ್ಟದ ಕೇಂದ್ರ ಪಶು ಸಂಗೋಪನೆ ಇಲಾಖೆಯಲ್ಲಿ ಕೆಲಸ ಮಾಡುತ್ತಿರುವ ಡಾ||ಕೆ.ನಾಗೇಶ್ವರರಾವ್ ಇವರಿಗೆ ಸೇರಿದ ಗೋಡಾನ್ ಆಗಿದ್ದು, ಸದರಿ ಗೋಡಾನಿನಲ್ಲಿ 08 ಬೀಟೆ ದಿಮ್ಮಿಗಳನ್ನು ದಾಸ್ತಾನು ಮಾಡಿರುವುದು ಕಂಡುಬಂದಿರುತ್ತದೆ. ಬೀಟೆ ದಿಮ್ಮಿಗಳನ್ನು ದಾಸ್ತಾನು ಮಾಡಲು ಸೂಕ್ತ ದಾಖಲೆಗಳನ್ನು ಒದಗಿಸುವಂತೆ ಆಸಾಮಿಯನ್ನು ಕೇಳಲಾಗಿ, ಆಸಾಮಿಯು ಹೊಸದಾಗಿ ಮನೆ ಕಟ್ಟಿಸಲು ಬೆಂಗಳೂರು ನಗರದ ವಾಸಿಯಾದ ಕೆ.ವೇಲು ಬಿನ್ ಕೃಷ್ಣನ್ ಇವರಿಂದ ಪಡೆದಿರುವುದಾಗಿ, ಹಾಗೂ ಇದಕ್ಕೆ ಸಂಬಂಧಿಸಿದ ಇಲಾಖಾ ರಹದಾರಿ ಪತ್ರವನ್ನು ತಂದುಕೊಡುವುದಾಗಿ ಒಪ್ಪಿಕೊಂಡು ತನ್ನ ಗೋಡಾನಿನಲ್ಲಿ ದಾಸ್ತಾನು ಮಾಡಿದ್ದು, ಆಸಾಮಿಯಿಂದ ಯಾವುದೇ ಇಲಾಖಾ ರಹದಾರಿ ಪಡೆದಿರುವುದಿಲ್ಲವೆಂದು ತಿಳಿಸಿರುತ್ತಾರೆ.

2. ಡಾ||ಕೆ.ನಾಗೇಶ್ವರರಾವ್ ಇವರು ನೀಡಿರುವ ಹೇಳಿಕೆಯನ್ವಯ ಕೆ.ವೇಲು ಬಿನ್ ಕೃಷ್ಣನ್, ಮುದ್ದಪ್ಪ ಗಾರ್ಡನ್ ವಾಸಿ, ದಯಾನಂದನಗರ, ಶ್ರೀರಾಮಪುರಂ, ಬೆಂಗಳೂರು ಇವರನ್ನು ವಶಕ್ಕೆ ಪಡೆದು ವಿಚಾರಣೆ ನಡೆಸಲಾಗಿ, ಮಡಿಕೇರಿ ಮೂಲದ ತನ್ನ ಸ್ನೇಹಿತನಾದ ಸುರೇಶ್ ಎಂಬುವವರಿಂದ ಸದರಿ ಬೀಟೆ ಮರದ ನಾಟಾಗಳನ್ನು ತರಿಸಿ ಮಾರಾಟ ಮಾಡಿರುವುದಾಗಿ ಹಾಗೂ ಬೀಟೆ ಮರದ ನಾಟಾಗಳನ್ನು ಸಾಗಣೆ ಮಾಡಲು ಇಲಾಖೆಯ ಯಾವುದೇ ವಿಧವಾದ ರಹದಾರಿಯಾಗಲೀ, ಬಿಲ್ಲುಗಳಾಗಲೀ ಇರುವುದಿಲ್ಲವೆಂದು ಹೇಳಿಕೆ ನೀಡಿರುತ್ತಾರೆ.

3. ಆರೋಪಿ ಕೆ.ವೇಲು ಇವರು ಈ ಹಿಂದೆಯೂ ಸಹ ಇದೇ ರೀತಿ ಕೃತ್ಯ ಎಸಗಿರುವುದಾಗಿ ಒಪ್ಪಿಕೊಂಡಿರುತ್ತಾರೆ. ಈ ಕೃತ್ಯವು ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 104ಎ 1 ರಿಂದ 8 ಹಾಗೂ 104 ಡಿ, 71ಎ ಮತ್ತು ಕರ್ನಾಟಕ ಅರಣ್ಯ ನಿಯಮವಾಳಿ 1969ರ ನಿಯಮ 127, 144, 165ರ ಉಲ್ಲಂಘನೆಯಾಗಿರುವುದರಿಂದ ಅಕ್ರಮವಾಗಿ ದಾಸ್ತಾನು ಮಾಡಲಾಗಿದ್ದ ಒಟ್ಟು 1.112 ಘನ ಮೀಟರ್ ಅಳತೆಯ ಬೀಟೆ ಮರದ ದಿಮ್ಮಿಗಳನ್ನು ಮಹಜರ್ ಸಹಿತ ಸರ್ಕಾರದ ಪರ ಅಮಾನತ್ತುಪಡಿಸಿಕೊಂಡು ಅರಣ್ಯ ಅಪರಾಧ ಮೊಕದ್ದಮೆಯನ್ನು ದಾಖಲಿಸಿರುತ್ತಾರೆ. ಈ ಪ್ರಕರಣದಲ್ಲಿ ಭಾಗಿಯಾಗಿದ್ದ ಆರೋಪಿ ಕೆ.ವೇಲು ಇವರನ್ನು ದಸ್ತಗಿರಿ ಮಾಡಿ ಘನ ನ್ಯಾಯಾಲಯದ ಆದೇಶದಂತೆ ನ್ಯಾಯಾಂಗ ವಶಕ್ಕೆ ಒಳಪಡಿಸಲಾಗಿದೆ. ಹೆಚ್ಚಿನ ತನಿಖೆಗಾಗಿ ಜಪ್ತು ಮಾಡಲಾದ ಮಾಲನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಅರಣ್ಯ ಸಂಚಾರಿ ದಳ, ಬೆಂಗಳೂರು ರವರ ಸಮಕ್ಷಮ ಹಾಜರುಪಡಿಸಿದ್ದು, ಜಪ್ತು ಮಾಡಲಾದ ಮುದ್ದೆಮಾಲನ್ನು ಸುರಕ್ಷತೆಗಾಗಿ ಜಾರಕಬಂಡೆ ದಾಸ್ತಾನು ಮಳಿಗೆಯ ಉಗ್ರಾಣದಲ್ಲಿ ದಾಸ್ತಾನಿರಿಸಲಾಗಿದೆ.

4. ಸೂಕ್ತ ರಹದಾರಿ ಇಲ್ಲದೇ ಅಕ್ರಮವಾಗಿ ಬೀಟೆ ಮರದ ತುಂಡುಗಳನ್ನು ದಾಸ್ತಾನು ಮಾಡುವುದು ಕರ್ನಾಟಕ ಅರಣ್ಯ ಕಾಯ್ದೆಯ ಉಲ್ಲಂಘನೆಯಾಗಿದ್ದು, ಸದರಿ ಕಾಯ್ದೆಯ ಸೆಕ್ಷನ್ 71ಎ ರಡಿಯಲ್ಲಿ ಕ್ರಮ ಜರುಗಿಸಲು ಅಮಾನತ್ತುಪಡಿಸಿಕೊಂಡಿರುವ ಒಟ್ಟು 1.112 ಘನ

ಮೀಟರ್ ಅಳತೆಯ ಬೀಟೆ ಮರದ ದಿಮ್ಮಿಗಳನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಕ್ರಮ ಜರುಗಿಸುವಂತೆ ವಲಯ ಅರಣ್ಯಾಧಿಕಾರಿಗಳು, ಅರಣ್ಯ ಸಂಚಾರಿ ದಳ, ಬೆಂಗಳೂರು ಇವರು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಬೆಂಗಳೂರು ರವರನ್ನು ಕೋರಿರುತ್ತಾರೆ.

5. ಪ್ರಕರಣಕ್ಕೆ ಸಂಬಂಧಿಸಿದ ಸರ್ಕಾರಿ ಪರ ಸಾಕ್ಷಿಗಳಾದ ಶ್ರೀ.ಕೆ.ವಿ.ಶ್ರೀನಿವಾಸಪ್ಪ ಬಿನ್ ಲೇಟ್.ವರದಪ್ಪ, ನಿವೃತ್ತ ವಲಯ ಅರಣ್ಯಾಧಿಕಾರಿ (ಅಂದಿನ ವಲಯ ಅರಣ್ಯಾಧಿಕಾರಿ), ಶ್ರೀ.ಎಸ್.ಎಂ.ಸಿದ್ದಪ್ಪ ಬಿನ್ ಮಾದಯ್ಯ, ವಲಯ ಅರಣ್ಯಾಧಿಕಾರಿ (ಅಂದಿನ ವನಪಾಲಕ), ಶ್ರೀ.ಪಿ.ಆರ್.ನಂಜುಂಡಶೆಟ್ಟಿ ಬಿನ್ ರಾಜಶೆಟ್ಟಿ, ಉಪ ವಲಯ ಅರಣ್ಯಾಧಿಕಾರಿ (ಅಂದಿನ ಅರಣ್ಯ ರಕ್ಷಕ) ಹಾಗೂ ಶ್ರೀ.ಹೆಚ್.ವೀರಪ್ಪ ಬಿನ್ ಹುಚ್ಚಹನುಮಯ್ಯ, ಉಪ ವಲಯ ಅರಣ್ಯಾಧಿಕಾರಿ (ಅಂದಿನ ಅರಣ್ಯ ರಕ್ಷಕ) ಇವರುಗಳ ಮುಖ್ಯ ವಿಚಾರಣೆಯನ್ನು ಸಹಾಯಕ ಸರ್ಕಾರಿ ಅಭಿಯೋಜಕರು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಬೆಂಗಳೂರು ರವರ ಸಮಕ್ಷಮ ನಡೆಸಿರುತ್ತಾರೆ.

6. ಸರ್ಕಾರಿ ಸಾಕ್ಷಿಗಳು ನೀಡಿದ ಹೇಳಿಕೆಗಳನ್ನು ಪರಿಶೀಲಿಸಲಾಗಿ, ದಿನಾಂಕ:08–02–1998ರಂದು ಬೆಂಗಳೂರು ನಗರದ ಬಾಗಲಗುಂಟೆ ಗ್ರಾಮದ ಸರ್ವೆ ನಂ.111ರಲ್ಲಿ ಪರಿವರ್ತನೆ ಮಾಡಿರುವ ಸೈಟ್ ನಂ.17ರಲ್ಲಿ ಕಟ್ಟಲಾಗಿದ್ದ ಸಿಮೆಂಟ್ ಗೋಡಾನಿನಲ್ಲಿ ಅಕ್ರಮವಾಗಿ ಒಟ್ಟು 1.112 ಘನ ಮೀಟರ್ ಅಳತೆಯ ಬೀಟೆ ಮರದ ದಿಮ್ಮಿಗಳನ್ನು ಅಕ್ರಮವಾಗಿ ದಾಸ್ತಾನು ಮಾಡಿರುವ ಮಾಡಿ ಕರ್ನಾಟಕ ಅರಣ್ಯ ಕಾಯ್ದೆ 1963 ಉಲ್ಲಂಘನೆ ಮಾಡಿರುವ ಬಗ್ಗೆ ಸಾಕ್ಷಿ ನೀಡಿರುವುದರಿಂದ ಹೆಚ್ಚಿನ ವಿಚಾರಣೆ ಅವಶ್ಯಕತೆ ಇಲ್ಲವೆಂದು ಸರ್ಕಾರಿ ವಕೀಲರು ವಾದವನ್ನು ಮಂಡಿಸಿರುತ್ತಾರೆ.

7. ಸರ್ಕಾರಿ ಸಾಕ್ಷಿಗಳು ನೀಡಿರುವ ಹೇಳಿಕೆಗಳು ಮತ್ತು ಪ್ರಕರಣದಲ್ಲಿ ಲಭ್ಯವಿರುವ ದಾಖಲೆಗಳನ್ನು ಆಧರಿಸಿ ಸರ್ಕಾರಿ ವಕೀಲರು ವಾದವನ್ನು ಮಂಡಿಸಿರುತ್ತಾರೆ. ಸರ್ಕಾರಿ ವಕೀಲರ ವಾದ ಹಾಗೂ ಹಾಜರುಪಡಿಸಿರುವ ದಾಖಲೆಗಳನ್ನು ಪರಿಶೀಲಿಸಲಾಯಿತು. ಆರೋಪಿ ಹಾಗೂ ಪ್ರತಿವಾದಿಗಳು ಹಾಜರಿರದ ಕಾರಣ, ಅವರ ವಿಳಾಸ ಪತ್ತೆಯಾಗದ ಕಾರಣ, ನನ್ನ ಎದುರಿನಲ್ಲಿ ಹಾಜರುಪಡಿಸಿರುವ ದಾಖಲೆಗಳ ಆದಾರದ ಮೇಲೆ ತೀರ್ಮಾನವನ್ನು ಕೈಗೊಳ್ಳಬೇಕಾಗಿರುತ್ತದೆ. ತೀರ್ಮಾನವನ್ನು ಕೈಗೊಳ್ಳಲು ಈ ಕೆಳಕಂಡ ಅಂಶಗಳನ್ನು ಪರಿಗಣಿಸಬೇಕಾಗಿದೆ.

8(1) ಸದರಿ ಪ್ರಕರಣದಲ್ಲಿ ಅಮಾನತ್ತುಪಡಿಸಿಕೊಳ್ಳಲಾಗಿರುವ ಒಟ್ಟು 1.112 ಘನ ಮೀಟರ್ ಅಳತೆಯ ಬೀಟೆ ಮರದ ದಿಮ್ಮಿಗಳನ್ನು ದಾಸ್ತಾನು ಮಾಡಿರುವುದು ಕರ್ನಾಟಕ ಅರಣ್ಯ ಕಾಯ್ದೆ 1963 ರ ಸೆಕ್ಷನ್ 104 ಎ ಮತ್ತು ನಿಯಮ 1969 ರ ನಿಯಮ 144 ಗಳ ಉಲ್ಲಂಘನೆಯಾಗಿದೆಯೇ?

8(2) ಸದರಿ ಪ್ರಕರಣದಲ್ಲಿ ಅಮಾನತ್ತುಪಡಿಸಿಕೊಳ್ಳಲಾಗಿರುವ ಒಟ್ಟು 1.112 ಘನ ಮೀಟರ್ ಅಳತೆಯ ಬೀಟೆ ಮರದ ದಿಮ್ಮಿಗಳನ ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆಯೇ?

8(3) ಮೇಲಿನ ಅಂಶಗಳಿಗೆ ಅನುಗುಣವಾಗಿ ಯಾವ ಆದೇಶ?
ಮೇಲಿನ ಅಂಶಗಳಿಗೆ ನನ್ನ ಉತ್ತರ ಈ ಕೆಳಕಂಡಂತೆ ಇರುತ್ತದೆ.

8(4) ಮೊದಲನೇ ಅಂಶಕ್ಕೆ ನನ್ನ ಉತ್ತರ ಅಹುದು ಎಂಬುದಾಗಿರುತ್ತದೆ.

8(5) ಎರಡನೇ ಅಂಶಕ್ಕೆ ನನ್ನ ಉತ್ತರ ಅಹುದು ಎಂಬುದಾಗಿರುತ್ತದೆ.

8(6) ಅಂತಿಮ ಆದೇಶವನ್ನು ಈ ಕೆಳಕಂಡ ಕಾರಣಗಳಿಗೆ ನೀಡಲಾಗಿದೆ.

9. ದಿನಾಂಕ:08–02–1998ರಂದು ಬೆಂಗಳೂರು ನಗರದ ಬಾಗಲಗುಂಟೆ ಗ್ರಾಮದ ಸರ್ವೆ ನಂ.111ರಲ್ಲಿ ಪರಿವರ್ತನೆ ಮಾಡಿರುವ ಸೈಟ್ ನಂ.17ರಲ್ಲಿ ಕಟ್ಟಲಾಗಿದ್ದ ಸಿಮೆಂಟ್ ಗೋಡಾನಿನಲ್ಲಿ ಅಕ್ರಮವಾಗಿ ಒಟ್ಟು 1.112 ಘನ ಮೀಟರ್ ಅಳತೆಯ ಬೀಟೆ ಮರದ ದಿಮ್ಮಿಗಳನ್ನು ಅಕ್ರಮವಾಗಿ ದಾಸ್ತಾನು ಮಾಡಿರುವುದು. ಕರ್ನಾಟಕ ಅರಣ್ಯ ಕಾಯ್ದೆ 1963ರ ಪ್ರಕಾರ ಬೀಟೆ ಮರದ ದಿಮ್ಮಿಗಳನ್ನು ದಾಸ್ತಾನು ಮಾಡಲು ಇರಬೇಕಾದ ರಹದಾರಿ ಮತ್ತು ಸಂಬಂಧಪಟ್ಟ ದಾಖಲೆಗಳು ಸದರಿ ಸ್ಥಳದಲ್ಲಿ ದೊರಕದೇ ಇರುವುದರಿಂದ ಮತ್ತು ಸದರಿ ಬೀಟೆ ದಿಮ್ಮಿಗಳನ್ನು ಅಕ್ರಮವಾಗಿ ದಾಸ್ತಾನು ಮಾಡಿರುವ ಬಗ್ಗೆ ಆರೋಪಿ ಒಪ್ಪಿಕೊಂಡಿರುವುದರಿಂದ ಅರಣ್ಯ ಮೊಕದ್ದಮೆಯು ದಾಖಲಾಗಿದ್ದು, ಅರಣ್ಯ ಸಿಬ್ಬಂದಿಯು ದಾಖಲಿಸಿರುವ ಮೊಕದ್ದಮೆಯು ಅರಣ್ಯ ಕಾಯ್ದೆಯ ವ್ಯಾಪ್ತಿಯಲ್ಲಿ ಸರಿ ಇರುತ್ತದೆ. ಸರ್ಕಾರಿ ಪರ ಸಾಕ್ಷಿಗಳು ಸಹ ಸದರಿ ಬೀಟೆ ಮರದ ದಿಮ್ಮಿಗಳನ್ನು ಅಕ್ರಮವಾಗಿ ದಾಸ್ತಾನು ಮಾಡಿರುವುದನ್ನು ವಿಚಾರಣಾ ಸಮಯದಲ್ಲಿ ಹೇಳಿಕೆ ನೀಡಿರುತ್ತಾರೆ. ಆದುದರಿಂದ ಕರ್ನಾಟಕ ಅರಣ್ಯ ಕಾಯ್ದೆ 1963 ಹಾಗೂ ನಿಯಮ 1969ರ ಉಲ್ಲಂಘನೆಯಾಗಿರುವುದು ಖಾತರಿಯಾಗಿರುತ್ತದೆ.

10. ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 80 ರ ಮೇರೆಗೆ ಅರಣ್ಯೋತ್ಪನ್ನಗಳ ಮಾಲೀಕತ್ವವು ರುಜುವಾತು ಆಗುವವರೆಗೆ ಅವು ಸರ್ಕಾರದ ಸ್ವತ್ತೆಂದು ಭಾವಿಸಲಾಗುವುದು. ಸದರಿ ಪ್ರಕರಣದಲ್ಲಿ ಅಮಾನತ್ತುಪಡಿಸಿಕೊಂಡಿರುವ ಒಟ್ಟು 1.112 ಘನ ಮೀಟರ್ ಅಳತೆಯ ಬೀಟೆ ಮರದ ದಿಮ್ಮಿಗಳನ್ನು ಅಧಿಕೃತ ಅಧಿಕಾರಿಯ ಮುಂದೆ ಹಾಜರುಪಡಿಸಲಾಗಿದೆ. ಸದರಿ ಮಾಲಿಗೆ ಸಂಬಂಧಪಟ್ಟ ಸೂಕ್ತ ರಹದಾರಿ ಹಾಗೂ ಯಾವುದೇ

ದಾಖಲೆಗಳು ಲಭ್ಯವಿಲ್ಲದಿರುವುದರಿಂದ ಅದನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಅವಕಾಶವಿರುವುದರಿಂದ ಸದರಿ ಮಾಲನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿರುತ್ತದೆ.

**ಆದೇಶ**

ನಾನು ಕೆ.ಬಿ.ಮಂಜುನಾಥ, ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಬೆಂಗಳೂರು ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71ಎ ರ ಮೇರೆಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಅರಣ್ಯ ಅಪರಾಧ ಮೊಕದ್ದಮೆ ಸಂಖ್ಯೆ:200/1997-98ರಲ್ಲಿ ಅಮಾನತ್ತುಪಡಿಸಿಕೊಂಡಿರುವ 08 ಬೀಟೆ ಮರದ ದಿಮ್ಮಿಗಳ ಅಳತೆ ಒಟ್ಟು 1.112 ಘನ ಮೀಟರ್‌ಗಳನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಈ ಮೂಲಕ ಆದೇಶಿಸುತ್ತೇನೆ.

ಈ ಆದೇಶವನ್ನು ಬೆರಳಚ್ಚುಗಾರರಿಗೆ ಉತ್ತಲೇಖನ ಕೊಟ್ಟಿದ್ದು, ಅವರು ಬೆರಳಚ್ಚಿಸಿದ ನಂತರ ತಿದ್ದುಪಡಿ ಮಾಡಿ ಈ ದಿನ ದಿನಾಂಕ:27-03-2012ರಂದು ತೆರೆದ ನ್ಯಾಯಾಲಯದಲ್ಲಿ ಘೋಷಿಸಲಾಗಿದೆ.

ಈ ಆದೇಶವು ರಾಜ್ಯಪತ್ರದಲ್ಲಿ ಪ್ರಕಟಗೊಂಡ 30 ದಿವಸಗಳ ನಂತರ ಜಾರಿಗೆ ಬರುತ್ತದೆ.

**ಕೆ.ಬಿ.ಮಂಜುನಾಥ**
ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಅರಣ್ಯ ಸಂಚಾರಿ ದಳ, ಬೆಂಗಳೂರು.

**ಪಿ.ಆರ್. 760**

## ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಅರಣ್ಯ ಸಂಚಾರಿ ದಳ, ಬೆಂಗಳೂರು ರವರ ನ್ಯಾಯಾಲಯ.

**ಎಫ್.ಓ.ಸಿ ಸಂಖ್ಯೆ:178/1990-91 ದಿನಾಂಕ:15/10/1990.**

**ಸಂಖ್ಯೆ:ಎ1.ಅಅಪ್ರ.71A.178/1990-91, ದಿನಾಂಕ:27/03/2012**

**ಉಪಸ್ಥಿತರು** : ಶ್ರೀ.ಕೆ.ಬಿ.ಮಂಜುನಾಥ, ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಬೆಂಗಳೂರು.

**ಪಿರ್ಯಾದಿ** : ವಲಯ ಅರಣ್ಯಾಧಿಕಾರಿ, ಅರಣ್ಯ ಸಂಚಾರಿ ದಳ, ಬೆಂಗಳೂರು.

**ಅರ್ಜಿದಾರರು ಆರೋಪಿಗಳು** : ಪತ್ತೆಯಾಗಿರುವುದಿಲ್ಲ.

**ಪ್ರಕರಣದ ಮುಖ್ಯಾಂಶಗಳು:**

1. ದಿನಾಂಕ:15-10-1990ರಂದು ಖಚಿತ ವರ್ತಮಾನದ ಮೇರೆಗೆ ಅರಣ್ಯ ಸಂಚಾರಿ ದಳದ ಸಿಬ್ಬಂದಿಗಳು ಬೆಂಗಳೂರು-ತುಮಕೂರು ರಸ್ತೆ, ರಾಷ್ಟ್ರೀಯ ಹೆದ್ದಾರಿ 4 ರಲ್ಲಿ ಸ್ಥಾಪಿತವಾಗಿದ್ದ ಟಿ.ಸಿ.ಐ ಸರಕು ಸಾಗಾಣಿಕೆ ಮಳಿಗೆಗೆ ಭೇಟಿ ನೀಡಿ ಪರಿಶೀಲಿಸಲಾಗಿ, ಮೆ||ಪ್ರೀಮಿಯರ್ ಏಜೆನ್ಸಿ ಕಂಪನಿಗೆ ಸೇರಿದ ಬಿಲ್ಲಿನ ಸಂಖ್ಯೆ:2238, ಹಾಗೂ 2239ಗಳಲ್ಲಿ ಅಗರಭತ್ತಿ ಸರಕು ಎಂಬುದಾಗಿ ನಮೂದಿಸಲಾಗಿರುತ್ತದೆ. ಸದರಿ ಗೋಣಿಚೀಲದ ಒಟ್ಟು 07 ಬಾಕ್ಸುಗಳನ್ನು ತೆಗೆಯಿಸಿ ನೋಡಲಾಗಿ, ಶ್ರೀಗಂಧದ ಚಕ್ಕೆ, ಕಾಂಡ ಹಾಗೂ ಬೇರುಗಳು ತುಂಬಿದ್ದು, ಇದರ ಒಟ್ಟು ತೂಕ 300 ಕೆ.ಜಿ ಇರುತ್ತದೆ. ಈ ಬಗ್ಗೆ ಟಿ.ಸಿ.ಐ ಸಂಸ್ಥೆಯ ಅಧಿಕಾರಿಗಳನ್ನು ವಿಚಾರಿಸಲಾಗಿ, ಯಾರೋ ಆಸಾಮಿಗಳು ಸುಳ್ಳು ವಿಳಾಸ ನೀಡಿ ಸದರಿ ಶ್ರೀಗಂಧವನ್ನು ಅಕ್ರಮವಾಗಿ ಸಾಗಾಣಿಕೆ ಮಾಡಲು ನೊಂದಾಯಿಸಿರುವುದಾಗಿ ತಿಳಿಸಿರುತ್ತಾರೆ. ಈ ಕೃತ್ಯವು ಕರ್ನಾಟಕ ಅರಣ್ಯ ಕಾಯ್ದೆ 1963 ಕಲಂ-84, 87, ಹಾಗೂ ಕರ್ನಾಟಕ ಅರಣ್ಯ ಅಧಿನಿಯಮ 1969ರ ನಿಯಮ 154 ಉಲ್ಲಂಘನೆಯಾಗಿರುವ ಕಾರಣ, ಪಂಚನಾಮೆಯ ಸಹಿತ ಒಟ್ಟು 300 ಕೆ.ಜಿ ಶ್ರೀಗಂಧವನ್ನು ಸರ್ಕಾರದ ಪರ ಅಮಾನತ್ತುಪಡಿಸಿಕೊಂಡು ಅರಣ್ಯ ಅಪರಾಧ ಮೊಕದ್ದಮೆ ದಾಖಲಿಸಿರುತ್ತಾರೆ. ಹೆಚ್ಚಿನ ತನಿಖೆಗಾಗಿ ಒಟ್ಟು 300 ಕೆ.ಜಿ ಶ್ರೀಗಂಧವನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಅರಣ್ಯ ಸಂಚಾರಿ ದಳ, ಬೆಂಗಳೂರು ರವರ ಸಮಕ್ಷಮ ಹಾಜರುಪಡಿಸಿರುತ್ತಾರೆ. ಜಪ್ತು ಮಾಡಲಾದ ಮುದ್ದೆಮಾಲನ್ನು ಸುರಕ್ಷತೆಗಾಗಿ ಅರಣ್ಯ ಸಂಚಾರಿ ದಳದ ದಾಸ್ತಾನು ಮಳಿಗೆಯಲ್ಲಿ ಇಡಲಾಗಿರುತ್ತದೆ.

2. ಸೂಕ್ತ ಪರವಾನಗಿ ಇಲ್ಲದೇ ಸುಳ್ಳು ವಿಳಾಸ ನೀಡಿ ಅಕ್ರಮವಾಗಿ ಶ್ರೀಗಂಧವನ್ನು ಸಾಗಣೆ ಮಾಡಲು ಯತ್ನಿಸಿರುವುದು ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 87ರ ಉಲ್ಲಂಘನೆಯಾಗಿದ್ದು, ಸದರಿ ಕಾಯ್ದೆಯ ಸೆಕ್ಷನ್ 71ಎ ರಡಿಯಲ್ಲಿ ಕ್ರಮ ಜರುಗಿಸಲು ಅಮಾನತ್ತುಪಡಿಸಿಕೊಂಡಿರುವ 300 ಕೆ.ಜಿ ಶ್ರೀಗಂಧವನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಕ್ರಮ ಜರುಗಿಸುವಂತೆ ವಲಯ ಅರಣ್ಯಾಧಿಕಾರಿಗಳು, ಅರಣ್ಯ ಸಂಚಾರಿ ದಳ, ಬೆಂಗಳೂರು ಇವರು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಬೆಂಗಳೂರು ರವರನ್ನು ಕೋರಿರುತ್ತಾರೆ.

3. ಪ್ರಕರಣಕ್ಕೆ ಸಂಬಂಧಿಸಿದ ಸರ್ಕಾರಿ ಪರ ಸಾಕ್ಷಿಗಳಾದ ಶ್ರೀ.ಕೆ.ಯು.ಪೋತಪ್ಪ ಬಿನ್ ಲೇಟ್.ಕೆ.ಯು.ಅಂಬಣ್ಣ, ವಲಯ ಅರಣ್ಯಾಧಿಕಾರಿ (ಅಂದಿನ ವನಪಾಲಕ) ಹಾಗೂ ಶ್ರೀ.ಟಿ.ಎಸ್.ಶಿವಾನಂದ ಬಿನ್ ಶ್ರೀರಂಗಯ್ಯ, ವಲಯ ಅರಣ್ಯಾಧಿಕಾರಿ (ಅಂದಿನ ವನಪಾಲಕ) ಇವರುಗಳ ಮುಖ್ಯ ವಿಚಾರಣೆಯನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಬೆಂಗಳೂರು ರವರ ಸಮಕ್ಷಮ ಸಹಾಯಕ ಸರ್ಕಾರಿ ಅಭಿಯೋಜಕರು ಪಡೆದಿರುತ್ತಾರೆ. ಸರ್ಕಾರಿ ಪರ ಸಾಕ್ಷಿಗಳು ನೀಡಿರುವ ಹೇಳಿಕೆಯನ್ನು ಪರಿಶೀಲಿಸಲಾಗಿ, ದಿನಾಂಕ: 15–10–1989 ರಂದು ಬೆಂಗಳೂರು–ತುಮಕೂರು ರಸ್ತೆ, ರಾಷ್ಟ್ರೀಯ ಹೆದ್ದಾರಿ 4 ರಲ್ಲಿ ಸ್ಥಾಪಿತವಾಗಿದ್ದ ಟಿ.ಸಿ.ಐ ಸರಕು ಸಾಗಾಣಿಕೆ ಮಳಿಗೆಯಲ್ಲಿ ಸೂಕ್ತ ಪರವಾನಗಿ ಇಲ್ಲದೇ ಅಕ್ರಮವಾಗಿ 300 ಕೆ.ಜಿ ಶ್ರೀಗಂಧವನ್ನು ದಾಸ್ತಾನು ಮಾಡಿ ಕರ್ನಾಟಕ ಅರಣ್ಯ ಕಾಯ್ದೆ 1963 ಉಲ್ಲಂಘನೆ ಮಾಡಿರುವುದು ರುಜುವಾತುಪಡಿಸಿಕೊಳ್ಳಲಾಗಿದೆ.

4. ಹಾಜರಿದ್ದ ಸರ್ಕಾರಿ ಸಾಕ್ಷಿಗಳು ನೀಡಿರುವ ಹೇಳಿಕೆಗಳು ಪ್ರಕರಣದಲ್ಲಿ ಸುಳ್ಳು ವಿಳಾಸ ನೀಡಿ ಸರಕು ಸಾಗಣೆ ಮಳಿಗೆಯಲ್ಲಿ ಅಕ್ರಮವಾಗಿ 300 ಕೆ.ಜಿ ಶ್ರೀಗಂಧವನ್ನು ದಾಸ್ತಾನು ಮಾಡಿರುವ ಬಗ್ಗೆ ಸಾಕ್ಷಿ ನೀಡಿರುವುದರಿಂದ ಹೆಚ್ಚಿನ ವಿಚಾರಣೆ ಅವಶ್ಯಕತೆ ಇಲ್ಲವೆಂದು ಸರ್ಕಾರಿ ವಕೀಲರು ವಾದವನ್ನು ಮಂಡಿಸಿರುತ್ತಾರೆ.

5. ಸರ್ಕಾರಿ ಸಾಕ್ಷಿಗಳು ನೀಡಿರುವ ಹೇಳಿಕೆಗಳು ಮತ್ತು ಪ್ರಕರಣದಲ್ಲಿ ಲಭ್ಯವಿರುವ ದಾಖಲೆಗಳನ್ನು ಆಧರಿಸಿ ಸರ್ಕಾರಿ ವಕೀಲರು ವಾದವನ್ನು ಮಂಡಿಸಿರುತ್ತಾರೆ. ಸರ್ಕಾರಿ ವಕೀಲರ ವಾದ ಹಾಗೂ ಹಾಜರುಪಡಿಸಿರುವ ದಾಖಲೆಗಳನ್ನು ಪರಿಶೀಲಿಸಲಾಯಿತು. ಪ್ರತಿವಾದಿಗಳು ಇಲ್ಲದ ಕಾರಣ ನನ್ನ ಎದುರಿನಲ್ಲಿ ಹಾಜರುಪಡಿಸಿರುವ ದಾಖಲೆಗಳ ಆದಾರದ ಮೇಲೆ ತೀರ್ಮಾನವನ್ನು ಕೈಗೊಳ್ಳಬೇಕಾಗಿರುತ್ತದೆ. ತೀರ್ಮಾನವನ್ನು ಕೈಗೊಳ್ಳಲು ಈ ಕೆಳಕಂಡ ಅಂಶಗಳನ್ನು ಪರಿಗಣಿಸಬೇಕಾಗಿದೆ.

6(1) ಸದರಿ ಪ್ರಕರಣದಲ್ಲಿ ಅಮಾನತ್ತುಪಡಿಸಿಕೊಳ್ಳಲಾಗಿರುವ ಒಟ್ಟು 300 ಕೆ.ಜಿ ಶ್ರೀಗಂಧವನ್ನು ಅಕ್ರಮವಾಗಿ ದಾಸ್ತಾನು ಮಾಡಿರುವುದು ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 87ರ ಉಲ್ಲಂಘನೆಯಾಗಿದೆಯೇ?

6(2) ಸದರಿ ಪ್ರಕರಣದಲ್ಲಿ ಅಮಾನತ್ತುಪಡಿಸಿಕೊಳ್ಳಲಾಗಿರುವ ಒಟ್ಟು 300 ಕೆ.ಜಿ ಶ್ರೀಗಂಧವನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆಯೇ?

6(3) ಮೇಲಿನ ಅಂಶಗಳಿಗೆ ಅನುಗುಣವಾಗಿ ಯಾವ ಆದೇಶ?
ಮೇಲಿನ ಅಂಶಗಳಿಗೆ ನನ್ನ ಉತ್ತರ ಈ ಕೆಳಕಂಡಂತೆ ಇರುತ್ತದೆ.

6(4) ಮೊದಲನೇ ಅಂಶಕ್ಕೆ ನನ್ನ ಉತ್ತರ ಅಹುದು ಎಂಬುದಾಗಿರುತ್ತದೆ.

6(5) ಎರಡನೇ ಅಂಶಕ್ಕೆ ನನ್ನ ಉತ್ತರ ಅಹುದು ಎಂಬುದಾಗಿರುತ್ತದೆ.

6(6) ಅಂತಿಮ ಆದೇಶವನ್ನು ಈ ಕೆಳಕಂಡ ಕಾರಣಗಳಿಗೆ ನೀಡಲಾಗಿದೆ.

7. ದಿನಾಂಕ:15–10–1990ರಂದು ಬೆಂಗಳೂರು–ತುಮಕೂರು ರಸ್ತೆ, ರಾಷ್ಟ್ರೀಯ ಹೆದ್ದಾರಿ 4 ರಲ್ಲಿ ಸ್ಥಾಪಿತವಾಗಿದ್ದ ಟಿ.ಸಿ.ಐ ಸರಕು ಸಾಗಾಣಿಕೆ ಮಳಿಗೆಯಲ್ಲಿ ಅರಣ್ಯ ಸಂಚಾರಿ ದಳದ ಸಿಬ್ಬಂದಿಗಳು ಪರಿಶೀಲನೆ ನಡೆಸಿದಾಗ ಮೆ॥ಪ್ರೀಮಿಯರ್ ಏಜೆನ್ಸಿ ಕಂಪನಿಗೆ ಸೇರಿದ ಬಿಲ್ಲುಗಳಲ್ಲಿ ಅಗರಭತ್ತಿ ಸರಕು ಎಂಬುದಾಗಿ ನಮೂದಾಗಿದ್ದು, ಗೋಣಿಚೀಲದ ಒಟ್ಟು 07 ಪಾರ್ಸೆಲ್ ಬಾಕ್ಸುಗಲ್ಲಿ 300 ಕೆ.ಜಿ ಶ್ರೀಗಂಧದ ಚಕ್ಕೆ, ಕಾಂಡ ಹಾಗೂ ಬೇರುಗಳು ತುಂಬಿರುವುದು ಕರ್ನಾಟಕ ಅರಣ್ಯ ಕಾಯ್ದೆ 1963 ರ ಸೆಕ್ಷನ್ 87ರ ಉಲ್ಲಂಘನೆಯಾಗಿರುತ್ತದೆ. ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 84ರ ಮೇರೆಗೆ ಶ್ರೀಗಂಧವು ರಾಜ್ಯ ಸರ್ಕಾರದ ಸ್ವತ್ತಾಗಿದ್ದು, ಅದರ ಮಾಲೀಕತ್ವವು ಸಾಬೀತಾಗುವವರೆಗೆ ರಾಜ್ಯ ಸರ್ಕಾರದ ಸ್ವತ್ತೆಂದು ಪರಿಗಣಿಸಬೇಕಾಗಿರುತ್ತದೆ. ಅರಣ್ಯ ಸಿಬ್ಬಂದಿಯು ದಾಖಲಿಸಿರುವ ಮೊಕದ್ದಮೆಯು ಅರಣ್ಯ ಕಾಯ್ದೆಯ ವ್ಯಾಪ್ತಿಯಲ್ಲಿ ಸರಿ ಇರುತ್ತದೆ. ಸರ್ಕಾರಿ ಪರ ಸಾಕ್ಷಿಗಳು ಸಹ ಸದರಿ ಶ್ರೀಗಂಧವನ್ನು ಅಕ್ರಮವಾಗಿ ಸಾಗಣೆ ಮಾಡಲು ಸರಕು ಸಾಗಾಣಿಕೆ ಸಂಸ್ಥೆಗೆ ಸುಳ್ಳು ವಿಳಾಸ ನೀಡಿರುವುದನ್ನು ವಿಚಾರಣಾ ಸಮಯದಲ್ಲಿ ಹೇಳಿಕೆ ನೀಡಿರುತ್ತಾರೆ. ಆರೋಪಿಗಳು ಪತ್ತೆಯಾಗದ ಕಾರಣ, ಶ್ರೀಗಂಧವನ್ನು ಅಕ್ರಮವಾಗಿ ಸರಕು ಸಾಗಾಣಿಕೆ ಸಂಸ್ಥೆಯ ಮುಖಾಂತರ ಸಾಗಣೆ ಮಾಡಲು ಯತ್ನಿಸಿರುವುದು ಸ್ಪಷ್ಟವಾಗಿರುತ್ತದೆ. ಆದುದರಿಂದ ಒಟ್ಟು 300 ಕೆ.ಜಿ ಶ್ರೀಗಂಧವನ್ನು ಕರ್ನಾಟಕ ಅರಣ್ಯ ಕಾಯ್ದೆ 1963 ರ ಸೆಕ್ಷನ್ 84ರ ಮೇರೆಗೆ ಸರ್ಕಾರಿ ಸ್ವತ್ತಾಗಿದ್ದು, ಸೆಕ್ಷನ್ 87ರ ಉಲ್ಲಂಘನೆ ಆಗಿರುವುದು ಖಾತರಿಯಾಗಿರುತ್ತದೆ.

8. ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71ಎ ಮೇರೆಗೆ ಸದರಿ ಪ್ರಕರಣದಲ್ಲಿ ಅಮಾನತ್ತುಪಡಿಸಿಕೊಂಡಿರುವ ಸರ್ಕಾರ ಸ್ವತ್ತಾದ 300 ಕೆ.ಜಿ ಶ್ರೀಗಂಧವನ್ನು ಅಧಿಕೃತ ಅಧಿಕಾರಿಯ ಮುಂದೆ ಹಾಜರುಪಡಿಸಿರುವುದರಿಂದ ಅಂತಹ ಸ್ವತ್ತನ್ನು ಮುಟ್ಟುಗೋಲು ಹಾಕಿಕೊಳ್ಳಲು ಅವಕಾಶವಿರುವುದರಿಂದ ಸದರಿ ಶ್ರೀಗಂಧವನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿರುತ್ತದೆ.

**ಆದೇಶ**

ನಾನು ಕೆ.ಬಿ.ಮಂಜುನಾಥ, ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಬೆಂಗಳೂರು ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71ಎ ರ ಮೇರೆಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಅರಣ್ಯ ಅಪರಾಧ ಮೊಕದ್ದಮೆ ಸಂಖ್ಯೆ:178/1990–91ರಲ್ಲಿ

ಅಮಾನತ್ತು–ಪಡಿಸಿಕೊಂಡಿರುವ ಒಟ್ಟು 300 ಕೆ.ಜಿ ಶ್ರೀಗಂಧದ ಮರದ ಚಕ್ಕೆ, ಕಾಂಡ ಹಾಗೂ ಬೇರುಗಳನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಈ ಮೂಲಕ ಆದೇಶಿಸುತ್ತೇನೆ.

ಈ ಆದೇಶವನ್ನು ಬೆರಳಚ್ಚುಗಾರರಿಗೆ ಉತ್ತಲೇಖನ ಕೊಟ್ಟಿದ್ದು, ಅವರು ಬೆರಳಚ್ಚಿಸಿದ ನಂತರ ತಿದ್ದುಪಡಿ ಮಾಡಿ ಈ ದಿನ ದಿನಾಂಕ:27–03–2012ರಂದು ತೆರೆದ ನ್ಯಾಯಾಲಯದಲ್ಲಿ ಘೋಷಿಸಲಾಗಿದೆ.

ಈ ಆದೇಶವು ರಾಜ್ಯಪತ್ರದಲ್ಲಿ ಪ್ರಕಟಗೊಂಡ 30 ದಿವಸಗಳ ನಂತರ ಜಾರಿಗೆ ಬರುತ್ತದೆ.

**ಕೆ.ಬಿ.ಮಂಜುನಾಥ**
ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಅರಣ್ಯ ಸಂಚಾರಿ ದಳ, ಬೆಂಗಳೂರು.

## ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಅರಣ್ಯ ಸಂಚಾರಿ ದಳ, ಬೆಂಗಳೂರು ರವರ ನ್ಯಾಯಾಲಯ.

**ಎಫ್.ಓ.ಸಿ ಸಂಖ್ಯೆ:182/1990–91 ದಿನಾಂಕ:25/10/1990.**

**ಸಂಖ್ಯೆ:ಎ1.ಅಅಪ್ರ.71A.182/1990–91, ದಿನಾಂಕ:27/03/2012**

**ಉಪಸ್ಥಿತರು** : ಶ್ರೀ.ಕೆ.ಬಿ.ಮಂಜುನಾಥ, ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಬೆಂಗಳೂರು.

**ಪಿರ್ಯಾದಿ** : ವಲಯ ಅರಣ್ಯಾಧಿಕಾರಿ, ಅರಣ್ಯ ಸಂಚಾರಿ ದಳ, ಬೆಂಗಳೂರು.

**ಅರ್ಜಿದಾರರು ಆರೋಪಿಗಳು** : ಪತ್ತೆಯಾಗಿರುವುದಿಲ್ಲ.

**ಪ್ರಕರಣದ ಮುಖ್ಯಾಂಶಗಳು:**

1. ದಿನಾಂಕ:25–10–1990ರಂದು ಖಚಿತ ವರ್ತಮಾನದ ಮೇರೆಗೆ ಅರಣ್ಯ ಸಂಚಾರಿ ದಳದ ಸಿಬ್ಬಂದಿಗಳು ಬೆಂಗಳೂರು ನಗರದ ರಾಜಾಜಿನಗರ 5ನೇ ಬ್ಲಾಕ್, ನಂ.1, 72 ಕ್ರಾಸ್, ಜಡಹಳ್ಳಿಯಲ್ಲಿರುವ ಟ್ರಾನ್ಸ್‌ಪೋರ್ಟ್ ಕಾರ್ಪೋರೇಷನ್ ದಾಸ್ತಾನು ಮಳಿಗೆಗೆ ಭೇಟಿ ನೀಡಿ ಪರಿಶೀಲನೆ ನಡೆಸಿದ ಸಂದರ್ಭದಲ್ಲಿ ಮೆ॥ಬಾಲಾಜಿ ಎಂಟರ್‌ಪ್ರೈಸಸ್ ಕಂಪನಿಗೆ ಸೇರಿದ ಬಿಲ್ಲಿನ ಸಂಖ್ಯೆ:101ರಲ್ಲಿ ಡೆಲ್ಲಿಗೆ ಸಾಗಣೆ ಮಾಡಲು ಇಡಲಾಗಿದ್ದ 07 ಬಂಡಲ್‌ಗಳನ್ನು ತೆಗೆಯಿಸಿ ನೋಡಲಾಗಿ, ಅದರಲ್ಲಿ ಶ್ರೀಗಂಧದ ತುಂಡು, ಚಕ್ಕೆ ಮತ್ತು ಬೇರುಗಳು ತುಂಬಿದ್ದು, ಅದರ ಒಟ್ಟು ತೂಕ 200 ಕೆ.ಜಿ ಇರುತ್ತದೆ. ಈ ಬಗ್ಗೆ ಟಿ.ಸಿ.ಐ ಸಂಸ್ಥೆಯ ಅಧಿಕಾರಿಗಳನ್ನು ವಿಚಾರಿಸಲಾಗಿ, ಯಾರೋ ಆಸಾಮಿಗಳು ಸುಳ್ಳು ವಿಳಾಸ ನೀಡಿ ಸದರಿ ಶ್ರೀಗಂಧವನ್ನು ಅಕ್ರಮವಾಗಿ ಸಾಗಾಣಿಕೆ ಮಾಡಲು ನೊಂದಾಯಿಸಿರುವುದಾಗಿ ತಿಳಿಸಿರುತ್ತಾರೆ. ಈ ಕೃತ್ಯವು ಕರ್ನಾಟಕ ಅರಣ್ಯ ಕಾಯ್ದೆ 1963 ಕಲಂ–84, 87, ಹಾಗೂ ಕರ್ನಾಟಕ ಅರಣ್ಯ ಅಧಿನಿಯಮ 1969ರ ನಿಯಮ 154 ಉಲ್ಲಂಘನೆಯಾಗಿರುವ ಕಾರಣ, ಪಂಚನಾಮೆಯ ಸಹಿತ ಒಟ್ಟು 200 ಕೆ.ಜಿ ಶ್ರೀಗಂಧವನ್ನು ಸರ್ಕಾರದ ಪರ ಅಮಾನತ್ತುಪಡಿಸಿಕೊಂಡು ಅರಣ್ಯ ಅಪರಾಧ ಮೊಕದ್ದಮೆ ದಾಖಲಿಸಿರುತ್ತಾರೆ. ಹೆಚ್ಚಿನ ತನಿಖೆಗಾಗಿ ಒಟ್ಟು 200 ಕೆ.ಜಿ ಶ್ರೀಗಂಧವನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಅರಣ್ಯ ಸಂಚಾರಿ ದಳ, ಬೆಂಗಳೂರು ರವರ ಸಮಕ್ಷಮ ಹಾಜರುಪಡಿಸಿರುತ್ತಾರೆ. ಜಪ್ತು ಮಾಡಲಾದ ಮುದ್ದೆಮಾಲನ್ನು ಸುರಕ್ಷತೆಗಾಗಿ ಅರಣ್ಯ ಸಂಚಾರಿ ದಳದ ದಾಸ್ತಾನು ಮಳಿಗೆಯಲ್ಲಿ ಇಡಲಾಗಿರುತ್ತದೆ.

2. ಸೂಕ್ತ ಪರವಾನಗಿ ಇಲ್ಲದೇ ಸುಳ್ಳು ವಿಳಾಸ ನೀಡಿ ಅಕ್ರಮವಾಗಿ ಶ್ರೀಗಂಧವನ್ನು ಸಾಗಣೆ ಮಾಡಲು ಯತ್ನಿಸಿರುವುದು ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 87ರ ಉಲ್ಲಂಘನೆಯಾಗಿದ್ದು, ಸದರಿ ಕಾಯ್ದೆಯ ಸೆಕ್ಷನ್ 71ಎ ರಡಿಯಲ್ಲಿ ಕ್ರಮ ಜರುಗಿಸಲು ಅಮಾನತ್ತುಪಡಿಸಿಕೊಂಡಿರುವ 200 ಕೆ.ಜಿ ಶ್ರೀಗಂಧವನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಕ್ರಮ ಜರುಗಿಸುವಂತೆ ವಲಯ ಅರಣ್ಯಾಧಿಕಾರಿಗಳು, ಅರಣ್ಯ ಸಂಚಾರಿ ದಳ, ಬೆಂಗಳೂರು ಇವರು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಬೆಂಗಳೂರು ರವರನ್ನು ಕೋರಿರುತ್ತಾರೆ.

3. ಪ್ರಕರಣಕ್ಕೆ ಸಂಬಂಧಿಸಿದ ಸರ್ಕಾರಿ ಪರ ಸಾಕ್ಷಿಗಳಾದ ಶ್ರೀ.ಕೆ.ಯು.ಪೋತಪ್ಪ ಬಿನ್ ಲೇಟ್.ಕೆ.ಯು.ಅಂಬಣ್ಣ, ವಲಯ ಅರಣ್ಯಾಧಿಕಾರಿ (ಅಂದಿನ ವನಪಾಲಕ), ಶ್ರೀ.ಟಿ.ಎಸ್.ಶಿವಾನಂದ ಬಿನ್ ಶ್ರೀರಂಗಯ್ಯ, ವಲಯ ಅರಣ್ಯಾಧಿಕಾರಿ (ಅಂದಿನ ವನಪಾಲಕ), ಕೆ.ಎಸ್.ರಾಜೇಂದ್ರ ಬಿನ್ ಚನ್ನವೀರಪ್ಪ, ವಲಯ ಅರಣ್ಯಾಧಿಕಾರಿ (ಅಂದಿನ ಅರಣ್ಯ ರಕ್ಷಕ) ಹಾಗೂ ಶ್ರೀ.ರಾಮಚಂದ್ರ ಬಿನ್ ಲೇಟ್.ಪುಟ್ಟಯ್ಯ, ಉಪ ವಲಯ ಅರಣ್ಯಾಧಿಕಾರಿ (ಅಂದಿನ ಅರಣ್ಯ ರಕ್ಷಕ) ಇವರುಗಳ ಮುಖ್ಯ ವಿಚಾರಣೆಯನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಬೆಂಗಳೂರು ರವರ ಸಮಕ್ಷಮ ಸಹಾಯಕ ಸರ್ಕಾರಿ ಅಭಿಯೋಜಕರು ಪಡೆದಿರುತ್ತಾರೆ. ಸರ್ಕಾರಿ ಪರ ಸಾಕ್ಷಿಗಳು ನೀಡಿರುವ ಹೇಳಿಕೆಯನ್ನು ಪರಿಶೀಲಿಸಲಾಗಿ, ದಿನಾಂಕ:25–10–1990 ರಂದು ಬೆಂಗಳೂರು ನಗರದ ರಾಜಾಜಿನಗರ 5ನೇ ಬ್ಲಾಕ್, ನಂ.1, 72

ಕ್ರಾಸ್, ಜಡಹಳ್ಳಿಯಲ್ಲಿರುವ ಟ್ರಾನ್ಸ್‌ಪೋರ್ಟ್ ಕಾರ್ಪೋರೇಷನ್ ದಾಸ್ತಾನು ಮಳಿಗೆಯಲ್ಲಿ ಸೂಕ್ತ ಪರವಾನಗಿ ಇಲ್ಲದೇ ಅಕ್ರಮವಾಗಿ 200 ಕೆ.ಜಿ ಶ್ರೀಗಂಧವನ್ನು ದಾಸ್ತಾನು ಮಾಡಿ ಕರ್ನಾಟಕ ಅರಣ್ಯ ಕಾಯ್ದೆ 1963 ಉಲ್ಲಂಘನೆ ಮಾಡಿರುವುದು ರುಜುವಾತುಪಡಿಸಿಕೊಳ್ಳಲಾಗಿದೆ.

4. ಹಾಜರಿದ್ದ ಸರ್ಕಾರಿ ಸಾಕ್ಷಿಗಳು ನೀಡಿರುವ ಹೇಳಿಕೆಗಳು ಪ್ರಕರಣದಲ್ಲಿ ಸುಳ್ಳು ವಿಳಾಸ ನೀಡಿ ಸರಕು ಸಾಗಣೆ ಮಳಿಗೆಯಲ್ಲಿ ಅಕ್ರಮವಾಗಿ 200 ಕೆ.ಜಿ ಶ್ರೀಗಂಧವನ್ನು ದಾಸ್ತಾನು ಮಾಡಿರುವ ಬಗ್ಗೆ ಸಾಕ್ಷಿ ನೀಡಿರುವುದರಿಂದ ಹೆಚ್ಚಿನ ವಿಚಾರಣೆ ಅವಶ್ಯಕತೆ ಇಲ್ಲವೆಂದು ಸರ್ಕಾರಿ ವಕೀಲರು ವಾದವನ್ನು ಮಂಡಿಸಿರುತ್ತಾರೆ.

5. ಸರ್ಕಾರಿ ಸಾಕ್ಷಿಗಳು ನೀಡಿರುವ ಹೇಳಿಕೆಗಳು ಮತ್ತು ಪ್ರಕರಣದಲ್ಲಿ ಲಭ್ಯವಿರುವ ದಾಖಲೆಗಳನ್ನು ಆಧರಿಸಿ ಸರ್ಕಾರಿ ವಕೀಲರು ವಾದವನ್ನು ಮಂಡಿಸಿರುತ್ತಾರೆ. ಸರ್ಕಾರಿ ವಕೀಲರ ವಾದ ಹಾಗೂ ಹಾಜರುಪಡಿಸಿರುವ ದಾಖಲೆಗಳನ್ನು ಪರಿಶೀಲಿಸಲಾಯಿತು. ಪ್ರತಿವಾದಿಗಳು ಇಲ್ಲದ ಕಾರಣ ನನ್ನ ಎದುರಿನಲ್ಲಿ ಹಾಜರುಪಡಿಸಿರುವ ದಾಖಲೆಗಳ ಆದಾರದ ಮೇಲೆ ತೀರ್ಮಾನವನ್ನು ಕೈಗೊಳ್ಳಬೇಕಾಗಿರುತ್ತದೆ. ತೀರ್ಮಾನವನ್ನು ಕೈಗೊಳ್ಳಲು ಈ ಕೆಳಕಂಡ ಅಂಶಗಳನ್ನು ಪರಿಗಣಿಸಬೇಕಾಗಿದೆ.

6(1) ಸದರಿ ಪ್ರಕರಣದಲ್ಲಿ ಅಮಾನತ್ತುಪಡಿಸಿಕೊಳ್ಳಲಾಗಿರುವ ಒಟ್ಟು 200 ಕೆ.ಜಿ ಶ್ರೀಗಂಧವನ್ನು ಅಕ್ರಮವಾಗಿ ದಾಸ್ತಾನು ಮಾಡಿರುವುದು ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 87ರ ಉಲ್ಲಂಘನೆಯಾಗಿದೆಯೇ?

6(2) ಸದರಿ ಪ್ರಕರಣದಲ್ಲಿ ಅಮಾನತ್ತುಪಡಿಸಿಕೊಳ್ಳಲಾಗಿರುವ ಒಟ್ಟು 200 ಕೆ.ಜಿ ಶ್ರೀಗಂಧವನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆಯೇ?

6(3) ಮೇಲಿನ ಅಂಶಗಳಿಗೆ ಅನುಗುಣವಾಗಿ ಯಾವ ಆದೇಶ?
ಮೇಲಿನ ಅಂಶಗಳಿಗೆ ನನ್ನ ಉತ್ತರ ಈ ಕೆಳಕಂಡಂತೆ ಇರುತ್ತದೆ.

6(4) ಮೊದಲನೇ ಅಂಶಕ್ಕೆ ನನ್ನ ಉತ್ತರ ಅಹುದು ಎಂಬುದಾಗಿರುತ್ತದೆ.

6(5) ಎರಡನೇ ಅಂಶಕ್ಕೆ ನನ್ನ ಉತ್ತರ ಅಹುದು ಎಂಬುದಾಗಿರುತ್ತದೆ.

6(6) ಅಂತಿಮ ಆದೇಶವನ್ನು ಈ ಕೆಳಕಂಡ ಕಾರಣಗಳಿಗೆ ನೀಡಲಾಗಿದೆ.

7. ದಿನಾಂಕ:25–10–1990ರಂದು ಬೆಂಗಳೂರು ನಗರದ ರಾಜಾಜಿನಗರ 5ನೇ ಬ್ಲಾಕ್, ನಂ.1, 72 ಕ್ರಾಸ್, ಜಡಹಳ್ಳಿಯಲ್ಲಿರುವ ಟ್ರಾನ್ಸ್‌ಪೋರ್ಟ್ ಕಾರ್ಪೋರೇಷನ್ ದಾಸ್ತಾನು ಮಳಿಗೆಯಲ್ಲಿ ಅರಣ್ಯ ಸಂಚಾರಿ ದಳದ ಸಿಬ್ಬಂದಿಗಳು ಪರಿಶೀಲನೆ ನಡೆಸಿದಾಗ ಮೆ॥ಬಾಲಾಜಿ ಎಂಟರ್‌ಪ್ರೈಸಸ್ ಕಂಪನಿಗೆ ಸೇರಿದ ಬಿಲ್ಲಿನ 07 ಪಾರ್ಸಲ್ ಬಾಕ್ಸುಗಳಲ್ಲಿ 200 ಕೆ.ಜಿ ಶ್ರೀಗಂಧದ ತುಂಡು, ಚಕ್ಕೆ ಹಾಗೂ ಬೇರುಗಳು ತುಂಬಿರುವುದು ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 87ರ ಉಲ್ಲಂಘನೆಯಾಗಿರುತ್ತದೆ. ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 84ರ ಮೇರೆಗೆ ಶ್ರೀಗಂಧವು ರಾಜ್ಯ ಸರ್ಕಾರದ ಸ್ವತ್ತಾಗಿದ್ದು, ಅದರ ಮಾಲೀಕತ್ವವು ಸಾಬೀತಾಗುವವರೆಗೆ ರಾಜ್ಯ ಸರ್ಕಾರದ ಸ್ವತ್ತೆಂದು ಪರಿಗಣಿಸಬೇಕಾಗಿರುತ್ತದೆ. ಅರಣ್ಯ ಸಿಬ್ಬಂದಿಯು ದಾಖಲಿಸಿರುವ ಮೊಕದ್ದಮೆಯು ಅರಣ್ಯ ಕಾಯ್ದೆಯ ವ್ಯಾಪ್ತಿಯಲ್ಲಿ ಸರಿ ಇರುತ್ತದೆ. ಸರ್ಕಾರಿ ಪರ ಸಾಕ್ಷಿಗಳು ಸಹ ಸದರಿ ಶ್ರೀಗಂಧವನ್ನು ಅಕ್ರಮವಾಗಿ ಸಾಗಣೆ ಮಾಡಲು ಸರಕು ಸಾಗಾಣಿಕೆ ಸಂಸ್ಥೆಗೆ ಸುಳ್ಳು ವಿಳಾಸ ನೀಡಿರುವುದನ್ನು ವಿಚಾರಣಾ ಸಮಯದಲ್ಲಿ ಹೇಳಿಕೆ ನೀಡಿರುತ್ತಾರೆ. ಆರೋಪಿಗಳು ಪತ್ತೆಯಾಗದ ಕಾರಣ, ಶ್ರೀಗಂಧವನ್ನು ಅಕ್ರಮವಾಗಿ ಸರಕು ಸಾಗಾಣಿಕೆ ಸಂಸ್ಥೆಯ ಮುಖಾಂತರ ಸಾಗಣೆ ಮಾಡಲು ಯತ್ನಿಸಿರುವುದು ಸ್ಪಷ್ಟವಾಗಿರುತ್ತದೆ. ಆದುದರಿಂದ ಒಟ್ಟು 200 ಕೆ.ಜಿ ಶ್ರೀಗಂಧವನ್ನು ಕರ್ನಾಟಕ ಅರಣ್ಯ ಕಾಯ್ದೆ 1963 ರ ಸೆಕ್ಷನ್ 84ರ ಮೇರೆಗೆ ಸರ್ಕಾರಿ ಸ್ವತ್ತಾಗಿದ್ದು, ಸೆಕ್ಷನ್ 87ರ ಉಲ್ಲಂಘನೆ ಆಗಿರುವುದು ಖಾತರಿಯಾಗಿರುತ್ತದೆ.

8. ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71ಎ ಮೇರೆಗೆ ಸದರಿ ಪ್ರಕರಣದಲ್ಲಿ ಅಮಾನತ್ತುಪಡಿಸಿಕೊಂಡಿರುವ ಸರ್ಕಾರ ಸ್ವತ್ತಾದ 200 ಕೆ.ಜಿ ಶ್ರೀಗಂಧವನ್ನು ಅಧಿಕೃತ ಅಧಿಕಾರಿಯ ಮುಂದೆ ಹಾಜರುಪಡಿಸಿರುವುದರಿಂದ ಅಂತಹ ಸ್ವತ್ತನ್ನು ಮುಟ್ಟುಗೋಲು ಹಾಕಿಕೊಳ್ಳಲು ಅವಕಾಶವಿರುವುದರಿಂದ ಸದರಿ ಶ್ರೀಗಂಧವನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿರುತ್ತದೆ.

**ಆದೇಶ**

ನಾನು ಕೆ.ಬಿ.ಮಂಜುನಾಥ, ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಬೆಂಗಳೂರು ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71ಎ ರ ಮೇರೆಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಅರಣ್ಯ ಅಪರಾಧ ಮೊಕದ್ದಮೆ ಸಂಖ್ಯೆ:182/1990–91ರಲ್ಲಿ ಅಮಾನತ್ತು–ಪಡಿಸಿಕೊಂಡಿರುವ ಒಟ್ಟು 200 ಕೆ.ಜಿ ಶ್ರೀಗಂಧದ ಮರದ ತುಂಡು, ಚಕ್ಕೆ ಹಾಗೂ ಬೇರುಗಳನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಈ ಮೂಲಕ ಆದೇಶಿಸುತ್ತೇನೆ.

ಈ ಆದೇಶವನ್ನು ಬೆರಳಚ್ಚುಗಾರರಿಗೆ ಉತ್ತಲೇಖನ ಕೊಟ್ಟಿದ್ದು, ಅವರು ಬೆರಳಚ್ಚಿಸಿದ ನಂತರ ತಿದ್ದುಪಡಿ ಮಾಡಿ ಈ ದಿನ ದಿನಾಂಕ:27–03–2012ರಂದು ತೆರೆದ ನ್ಯಾಯಾಲಯದಲ್ಲಿ ಘೋಷಿಸಲಾಗಿದೆ.

ಈ ಆದೇಶವು ರಾಜ್ಯಪತ್ರದಲ್ಲಿ ಪ್ರಕಟಗೊಂಡ 30 ದಿವಸಗಳ ನಂತರ ಜಾರಿಗೆ ಬರುತ್ತದೆ.

**ಕೆ.ಬಿ.ಮಂಜುನಾಥ**
ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಅರಣ್ಯ ಸಂಚಾರಿ ದಳ, ಬೆಂಗಳೂರು.

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಅರಣ್ಯ ಸಂಚಾರಿ ದಳ, ಬೆಂಗಳೂರು ರವರ ನ್ಯಾಯಾಲಯ.**

**ಎಫ್.ಓ.ಸಿ ಸಂಖ್ಯೆ: 204/1993–94 ದಿನಾಂಕ:04/09/1993.**

**ಸಂಖ್ಯೆ:ಎ1.ಅಅಪ್ರ.71A.204/1993–94, ದಿನಾಂಕ:27/03/2012**

| | | |
|---|---|---|
| **ಉಪಸ್ಥಿತರು** | : | ಶ್ರೀ.ಕೆ.ಬಿ.ಮಂಜುನಾಥ, ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಬೆಂಗಳೂರು. |
| **ಪಿರ್ಯಾದಿ** | : | ವಲಯ ಅರಣ್ಯಾಧಿಕಾರಿ, ಅರಣ್ಯ ಸಂಚಾರಿ ದಳ, ಬೆಂಗಳೂರು. |
| **ಅರ್ಜಿದಾರರು ಆರೋಪಿಗಳು** | : | ಪ್ಯಾರೇಜಾನ್ ಬಿನ್ ಅಬ್ದುಲ್ ಸತ್ತಾರ್, ರಸೀಲ್ದಾರ್ ಸ್ಟ್ರೀಟ್, ಶೇಷಾದ್ರಿಪುರಂ, ಬೆಂಗಳೂರು (ತಲೆಮರೆಸಿಕೊಂಡಿರುತ್ತಾರೆ). |

**ಪ್ರಕರಣದ ಮುಖ್ಯಾಂಶಗಳು:**

1. ದಿನಾಂಕ:04–09–1993ರಂದು ಸಂಜೆ 4.30ರ ಸಮಯದಲ್ಲಿ ಕರ್ನಾಟಕ ಅರಣ್ಯ ಕಾಯ್ದೆ 1963ರ ಉಲ್ಲಂಘನೆ ಬಗ್ಗೆ ಬಂದ ಖಚಿತ ಮಾಹಿತಿಯ ಮೇರೆಗೆ ಅರಣ್ಯ ಸಂಚಾರಿ ದಳದ ಸಿಬ್ಬಂದಿಗಳು ಬೆಂಗಳೂರು ನಗರ, ಶೇಷಾದ್ರಿಪುರಂನಲ್ಲಿರುವ ರಶೀಲ್ದಾರ್ ಸ್ಟ್ರೀಟ್‌ನ ಮನೆ ನಂ.105ಕ್ಕೆ ಭೇಟಿ ಸದರಿ ಮನೆಯ ಬಾಗಿಲನ್ನು ತೆರೆದು ನೋಡಲಾಗಿ, ಮೂರು ಗೋಣಿಚೀಲದಲ್ಲಿ ಕಟ್ಟಿಗೆಯನ್ನು ತುಂಬಿರುವುದು ಕಂಡುಬಂದಿರುತ್ತದೆ. ಸದರಿ ಕಟ್ಟಿಗೆಯನ್ನು ತುಂಬಿದ ಚೀಲಗಳನ್ನು ಪರಿಶೀಲಿಸಿ ನೋಡಲಾಗಿ, ಶ್ರೀಗಂಧದ ಮರದ ಚಿಕ್ಕ ತುಂಡುಗಳು ಹಾಗೂ ಬೇರುಗಳು ಇದ್ದು, ಅವುಗಳ ತೂಕ ಮಾಡಲಾಗಿ, ಒಟ್ಟು 140 ಕೆ.ಜಿ. ಇರುತ್ತದೆ. ಮುಂದುವರೆದು ಸದರಿ ಮನೆಯಲ್ಲಿ ಯಾರೂ ಸಹ ವಾರಸುದಾರರು ಇಲ್ಲದಿದ್ದ ಕಾರಣ, ಅಕ್ಕಪಕ್ಕದವರನ್ನು ವಿಚಾರಿಸಲಾಗಿ, ಮನೆಯು ಶ್ರೀ.ಪ್ಯಾರೇಜಾನ್ ಬಿನ್ ಅಬ್ದುಲ್ ಸತ್ತಾರ್ ಎಂಬುವವರಿಗೆ ಸೇರಿದ್ದಾಗಿರುತ್ತದೆ ಎಂದು ತಿಳಿಸಿರುತ್ತಾರೆ. ಈ ವ್ಯಕ್ತಿಯು ತಲೆಮರೆಸಿಕೊಂಡಿರುವುದಾಗಿ ತಿಳಿದುಬಂದ ಹಿನ್ನೆಲೆಯಲ್ಲಿ ಅಕ್ರಮವಾಗಿ ಶೇಖರಿಸಿಟ್ಟಿದ್ದ ಒಟ್ಟು 140 ಕೆ.ಜಿ ಶ್ರೀಗಂಧವನ್ನು ಮಹಜರ್ ಸಹಿತ ಸರ್ಕಾರದ ಪರ ಅಮಾನತ್ತುಪಡಿಸಿಕೊಂಡು ಅರಣ್ಯ ಅಪರಾಧ ಮೊಕದ್ದಮೆಯನ್ನು ದಾಖಲಿಸಿರುತ್ತಾರೆ. ಹೆಚ್ಚಿನ ತನಿಖೆಗಾಗಿ ಒಟ್ಟು 140 ಕೆ.ಜಿ ಶ್ರೀಗಂಧವನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಅರಣ್ಯ ಸಂಚಾರಿ ದಳ, ಬೆಂಗಳೂರು ರವರ ಸಮಕ್ಷಮ ಹಾಜರುಪಡಿಸಿರುತ್ತಾರೆ. ಜಪ್ತು ಮಾಡಲಾದ ಮುದ್ದೆಮಾಲನ್ನು ಸುರಕ್ಷತೆಗಾಗಿ ಅರಣ್ಯ ಸಂಚಾರಿ ದಳದ ದಾಸ್ತಾನು ಮಳಿಗೆಯಲ್ಲಿ ಇಡಲಾಗಿರುತ್ತದೆ.

2. ಸೂಕ್ತ ರಹದಾರಿ ಇಲ್ಲದೇ ಅಕ್ರಮವಾಗಿ ಶ್ರೀಗಂಧವನ್ನು ದಾಸ್ತಾನು ಮಾಡಿರುವುದು ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 87ರ ಉಲ್ಲಂಘನೆಯಾಗಿದ್ದು, ಸದರಿ ಕಾಯ್ದೆಯ ಸೆಕ್ಷನ್ 71ಎ ರಡಿಯಲ್ಲಿ ಕ್ರಮ ಜರುಗಿಸಲು ಅಮಾನತ್ತುಪಡಿಸಿಕೊಂಡಿರುವ 140 ಕೆ.ಜಿ ಶ್ರೀಗಂಧವನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಕ್ರಮ ಜರುಗಿಸುವಂತೆ ವಲಯ ಅರಣ್ಯಾಧಿಕಾರಿಗಳು, ಅರಣ್ಯ ಸಂಚಾರಿ ದಳ, ಬೆಂಗಳೂರು ಇವರು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಬೆಂಗಳೂರು ರವರನ್ನು ಕೋರಿರುತ್ತಾರೆ.

3. ಪ್ರಕರಣಕ್ಕೆ ಸಂಬಂಧಿಸಿದ ಸರ್ಕಾರಿ ಪರ ಸಾಕ್ಷಿಗಳಾದ ಶ್ರೀ.ಟಿ.ಕೆ.ಮುನಿರಾಜು ಬಿನ್ ಕೆಂಪಣ್ಣ, ಉಪ ವಲಯ ಅರಣ್ಯಾಧಿಕಾರಿ (ಅಂದಿನ ಅರಣ್ಯ ರಕ್ಷಕ) ಹಾಗೂ ಶ್ರೀ.ಬಿ.ಆರ್.ಡಿ.ಜಗದೀಶ್ ಗೌಡ ಬಿನ್ ರಾಮಣ್ಣ, ಉಪ ವಲಯ ಅರಣ್ಯಾಧಿಕಾರಿ (ಅಂದಿನ ಅರಣ್ಯ ರಕ್ಷಕ) ಇವರುಗಳ ಮುಖ್ಯ ವಿಚಾರಣೆಯನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಬೆಂಗಳೂರು ರವರ ಸಮಕ್ಷಮ ಸಹಾಯಕ ಸರ್ಕಾರಿ ಅಭಿಯೋಜಕರು ಪಡೆದಿರುತ್ತಾರೆ. ಸರ್ಕಾರಿ ಪರ ಸಾಕ್ಷಿಗಳು ನೀಡಿರುವ ಹೇಳಿಕೆಯನ್ನು ಪರಿಶೀಲಿಸಲಾಗಿ, ದಿನಾಂಕ:04–09–1993 ರಂದು ಬೆಂಗಳೂರು ನಗರ, ಶೇಷಾದ್ರಿಪುರಂನಲ್ಲಿರುವ ರಶೀಲ್ದಾರ್ ಸ್ಟ್ರೀಟ್ ನ ಮನೆ ನಂ.105ರಲ್ಲಿ ಅಕ್ರಮವಾಗಿ ಶ್ರೀಗಂಧವನ್ನು ದಾಸ್ತಾನು ಮಾಡಿ ಕರ್ನಾಟಕ ಅರಣ್ಯ ಕಾಯ್ದೆ 1963 ಉಲ್ಲಂಘನೆ ಮಾಡಿರುವುದು ರುಜುವಾತುಪಡಿಸಿಕೊಳ್ಳಲಾಗಿದೆ. ಸದರಿ ಮನೆಯಲ್ಲಿ ದಾಸ್ತಾನು ಮಾಡಿದ್ದ ಶ್ರೀಗಂಧದ ಬಗ್ಗೆ ಸರ್ಕಾರಿ ಪರ ಸಾಕ್ಷಿ ಶ್ರೀ.ಡಿ.ಸಿ.ನಾರಾಯಣ ಮೂರ್ತಿ ಬಿನ್ ಎನ್.ಚನ್ನಕೇಶವಯ್ಯ, ಉಪ ಅರಣ್ಯ ಸಂರಕ್ಷಣಾಧಿಕಾರಿ ಇವರು ಶ್ರೀಗಂಧದ ದೃಢೀಕರಣ ನೀಡಿರುತ್ತಾರೆ.

4. ಹಾಜರಿದ್ದ ಸರ್ಕಾರಿ ಸಾಕ್ಷಿಗಳು ನೀಡಿರುವ ಹೇಳಿಕೆಗಳು ಪ್ರಕರಣದಲ್ಲಿ 140 ಕೆ.ಜಿ ಶ್ರೀಗಂಧವನ್ನು ಅಕ್ರಮವಾಗಿ ದಾಸ್ತಾನು ಮಾಡಿರುವ ಬಗ್ಗೆ ಸಾಕ್ಷಿ ನೀಡಿರುವುದರಿಂದ ಹೆಚ್ಚಿನ ವಿಚಾರಣೆ ಅವಶ್ಯಕತೆ ಇಲ್ಲವೆಂದು ಸರ್ಕಾರಿ ವಕೀಲರು ವಾದವನ್ನು ಮಂಡಿಸಿರುತ್ತಾರೆ.

5. ಸರ್ಕಾರಿ ಸಾಕ್ಷಿಗಳು ನೀಡಿರುವ ಹೇಳಿಕೆಗಳು ಮತ್ತು ಪ್ರಕರಣದಲ್ಲಿ ಲಭ್ಯವಿರುವ ದಾಖಲೆಗಳನ್ನು ಆಧರಿಸಿ ಸರ್ಕಾರಿ ವಕೀಲರು ವಾದವನ್ನು ಮಂಡಿಸಿರುತ್ತಾರೆ. ಸರ್ಕಾರಿ ವಕೀಲರ ವಾದ ಹಾಗೂ ಹಾಜರುಪಡಿಸಿರುವ ದಾಖಲೆಗಳನ್ನು ಪರಿಶೀಲಿಸಲಾಯಿತು. ಪ್ರತಿವಾದಿಗಳು ಹಾಜರಿರದ ಕಾರಣ, ಅವರ ವಿಳಾಸ ಪತ್ತೆಯಾಗದ ಕಾರಣ, ನನ್ನ ಎದುರಿನಲ್ಲಿ ಹಾಜರುಪಡಿಸಿರುವ ದಾಖಲೆಗಳ ಆದಾರದ ಮೇಲೆ ತೀರ್ಮಾನವನ್ನು ಕೈಗೊಳ್ಳಬೇಕಾಗಿರುತ್ತದೆ. ತೀರ್ಮಾನವನ್ನು ಕೈಗೊಳ್ಳಲು ಈ ಕೆಳಕಂಡ ಅಂಶಗಳನ್ನು ಪರಿಗಣಿಸಬೇಕಾಗಿದೆ.

6(1) ಸದರಿ ಪ್ರಕರಣದಲ್ಲಿ ಅಮಾನತ್ತುಪಡಿಸಿಕೊಳ್ಳಲಾಗಿರುವ ಒಟ್ಟು 140 ಕೆ.ಜಿ ಶ್ರೀಗಂಧವನ್ನು ಅಕ್ರಮವಾಗಿ ದಾಸ್ತಾನು ಮಾಡಿರುವುದು ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 87ರ ಉಲ್ಲಂಘನೆಯಾಗಿದೆಯೇ?

6(2) ಸದರಿ ಪ್ರಕರಣದಲ್ಲಿ ಅಮಾನತ್ತುಪಡಿಸಿಕೊಳ್ಳಲಾಗಿರುವ ಒಟ್ಟು 140 ಕೆ.ಜಿ ಶ್ರೀಗಂಧವನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆಯೇ?

6(3) ಮೇಲಿನ ಅಂಶಗಳಿಗೆ ಅನುಗುಣವಾಗಿ ಯಾವ ಆದೇಶ?
ಮೇಲಿನ ಅಂಶಗಳಿಗೆ ನನ್ನ ಉತ್ತರ ಈ ಕೆಳಕಂಡಂತೆ ಇರುತ್ತದೆ.

6(4) ಮೊದಲನೇ ಅಂಶಕ್ಕೆ ನನ್ನ ಉತ್ತರ ಅಹುದು ಎಂಬುದಾಗಿರುತ್ತದೆ.

6(5) ಎರಡನೇ ಅಂಶಕ್ಕೆ ನನ್ನ ಉತ್ತರ ಅಹುದು ಎಂಬುದಾಗಿರುತ್ತದೆ.

6(6) ಅಂತಿಮ ಆದೇಶವನ್ನು ಈ ಕೆಳಕಂಡ ಕಾರಣಗಳಿಗೆ ನೀಡಲಾಗಿದೆ.

7. ದಿನಾಂಕ:04–09–1993ರಂದು ಬೆಂಗಳೂರು ನಗರ, ಶೇಷಾದ್ರಿಪುರಂನಲ್ಲಿರುವ ರಶೀಲ್ದಾರ್ ಸ್ಟ್ರೀಟ್‌ನ ಮನೆ ನಂ.105ರಲ್ಲಿ ಅಕ್ರಮವಾಗಿ ಒಟ್ಟು 140 ಕೆ.ಜಿ ತೂಕವುಳ್ಳ ಶ್ರೀಗಂಧವನ್ನು ದಾಸ್ತಾನು ಮಾಡಿರುವುದು ಕರ್ನಾಟಕ ಅರಣ್ಯ ಕಾಯ್ದೆ 1963 ರ ಸೆಕ್ಷನ್ 87ರ ಉಲ್ಲಂಘನೆಯಾಗಿರುತ್ತದೆ. ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 84ರ ಮೇರೆಗೆ ಶ್ರೀಗಂಧವು ರಾಜ್ಯ ಸರ್ಕಾರದ ಸ್ವತ್ತಾಗಿದ್ದು, ಅದರ ಮಾಲೀಕತ್ವವು ಸಾಬೀತಾಗುವವರೆಗೆ ರಾಜ್ಯ ಸರ್ಕಾರದ ಸ್ವತ್ತೆಂದು ಪರಿಗಣಿಸಬೇಕಾಗಿರುತ್ತದೆ. ಅರಣ್ಯ ಸಿಬ್ಬಂದಿಯು ದಾಖಲಿಸಿರುವ ಮೊಕದ್ದಮೆಯು ಅರಣ್ಯ ಕಾಯ್ದೆಯ ವ್ಯಾಪ್ತಿಯಲ್ಲಿ ಸರಿ ಇರುತ್ತದೆ. ಸರ್ಕಾರಿ ಪರ ಸಾಕ್ಷಿಗಳು ಸಹ ಸದರಿ ಶ್ರೀಗಂಧವನ್ನು ಅಕ್ರಮವಾಗಿ ದಾಸ್ತಾನು ಮಾಡಿರುವುದನ್ನು ವಿಚಾರಣಾ ಸಮಯದಲ್ಲಿ ಹೇಳಿಕೆ ನೀಡಿರುತ್ತಾರೆ. ಆರೋಪಿಯು ತಲೆಮರೆಸಿಕೊಂಡಿರುವ ಕಾರಣ, ಶ್ರೀಗಂಧವನ್ನು ಅಕ್ರಮವಾಗಿ ದಾಸ್ತಾನು ಮಾಡಿರುವುದು ಸ್ಪಷ್ಟವಾಗಿರುತ್ತದೆ. ಆದುದರಿಂದ ಒಟ್ಟು 140 ಕೆ.ಜಿ ಶ್ರೀಗಂಧವನ್ನು ಕರ್ನಾಟಕ ಅರಣ್ಯ ಕಾಯ್ದೆ 1963 ರ ಸೆಕ್ಷನ್ 84ರ ಮೇರೆಗೆ ಸರ್ಕಾರಿ ಸ್ವತ್ತಾಗಿದ್ದು, ಸೆಕ್ಷನ್ 87ರ ಉಲ್ಲಂಘನೆ ಆಗಿರುವುದು ಖಾತರಿಯಾಗಿರುತ್ತದೆ.

8. ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71ಎ ಮೇರೆಗೆ ಸದರಿ ಪ್ರಕರಣದಲ್ಲಿ ಅಮಾನತ್ತುಪಡಿಸಿಕೊಂಡಿರುವ ಸರ್ಕಾರ ಸ್ವತ್ತಾದ 140 ಕೆ.ಜಿ ಶ್ರೀಗಂಧವನ್ನು ಅಧಿಕೃತ ಅಧಿಕಾರಿಯ ಮುಂದೆ ಹಾಜರುಪಡಿಸಿರುವುದರಿಂದ ಅಂತಹ ಸ್ವತ್ತನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಅವಕಾಶವಿರುವುದರಿಂದ ಸದರಿ ಶ್ರೀಗಂಧವನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿರುತ್ತದೆ.

**ಆದೇಶ**

ನಾನು ಕೆ.ಬಿ.ಮಂಜುನಾಥ, ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಬೆಂಗಳೂರು ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71ಎ ರ ಮೇರೆಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಅರಣ್ಯ ಅಪರಾಧ ಮೊಕದ್ದಮೆ ಸಂಖ್ಯೆ:204/1993–94ರಲ್ಲಿ ಅಮಾನತ್ತು–ಪಡಿಸಿಕೊಂಡಿರುವ ಒಟ್ಟು 140 ಕೆ.ಜಿ ಶ್ರೀಗಂಧದ ಮರದ ಚಿಕ್ಕ ತುಂಡುಗಳು ಹಾಗೂ ಬೇರುಗಳನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಈ ಮೂಲಕ ಆದೇಶಿಸುತ್ತೇನೆ.

ಈ ಆದೇಶವನ್ನು ಬೆರಳಚ್ಚುಗಾರರಿಗೆ ಉತ್ತಲೇಖನ ಕೊಟ್ಟಿದ್ದು, ಅವರು ಬೆರಳಚ್ಚಿಸಿದ ನಂತರ ತಿದ್ದುಪಡಿ ಮಾಡಿ ಈ ದಿನ ದಿನಾಂಕ:27–03–2012ರಂದು ತೆರೆದ ನ್ಯಾಯಾಲಯದಲ್ಲಿ ಘೋಷಿಸಲಾಗಿದೆ.

ಈ ಆದೇಶವು ರಾಜ್ಯಪತ್ರದಲ್ಲಿ ಪ್ರಕಟಗೊಂಡ 30 ದಿವಸಗಳ ನಂತರ ಜಾರಿಗೆ ಬರುತ್ತದೆ.

**ಕೆ.ಬಿ.ಮಂಜುನಾಥ**

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಅರಣ್ಯ ಸಂಚಾರಿ ದಳ, ಬೆಂಗಳೂರು.

## ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಅರಣ್ಯ ಸಂಚಾರಿ ದಳ, ಬೆಂಗಳೂರು ರವರ ನ್ಯಾಯಾಲಯ.

**ಎಫ್.ಓ.ಸಿ ಸಂಖ್ಯೆ: 148/1990–91 ದಿನಾಂಕ:15/09/1990.**

**ಸಂಖ್ಯೆ:ಎ1.ಅಅಪ್ರ.71A.148/1990–91, ದಿನಾಂಕ:30/01/2012**

| | | |
|---|---|---|
| **ಉಪಸ್ಥಿತರು** | : | ಶ್ರೀ.ಕೆ.ಬಿ.ಮಂಜುನಾಥ, ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಬೆಂಗಳೂರು. |
| **ಫಿರ್ಯಾದಿ** | : | ವಲಯ ಅರಣ್ಯಾಧಿಕಾರಿ, ಅರಣ್ಯ ಸಂಚಾರಿ ದಳ, ಬೆಂಗಳೂರು. |
| **ಅರ್ಜಿದಾರರು ಆರೋಪಿಗಳು** | : | ಪ್ರತಾಪ್ ಬಿನ್ ವೀರಾರೆಡ್ಡಿ, ಕಡಪ ಜಿಲ್ಲೆ, ಆಂದ್ರಪ್ರದೇಶ. (ಬಂಧಿಸಿದೆ). |

**ಪ್ರಕರಣದ ಮುಖ್ಯಾಂಶಗಳು:**

1. ದಿನಾಂಕ:15–09–1990ರಂದು ಬೆಳಿಗ್ಗೆ 08 ಗಂಟೆಯ ಸಮಯದಲ್ಲಿ ಬೆಂಗಳೂರು ನಗರದ ಹೈದರಾಬಾದ್ ರಸ್ತೆಯಲ್ಲಿರುವ ವಾಣಿಜ್ಯ ತೆರಿಗೆ ತನಿಖಾ ಠಾಣೆ ಬಳಿ ಅರಣ್ಯ ಸಂಚಾರಿ ದಳದ ಸಿಬ್ಬಂದಿಗಳು ತಪಾಸಣಾ ಕಾರ್ಯದಲ್ಲಿ ನಿರತರಾಗಿದ್ದಾಗ ಹೈದರಾಬಾದ್ ಕಡೆಯಿಂದ ಬೆಂಗಳೂರು ಕಡೆಗೆ ಬರುತ್ತಿದ್ದ ಆಂದ್ರಪ್ರದೇಶದ ಸರ್ಕಾರಿ ರಸ್ತೆ ಸಾರಿಗೆ ಸಂಸ್ಥೆಗೆ ಸೇರಿದ ಬಸ್ ಸಂಖ್ಯೆ: ಎಪಿ–9–ಜೆಡ್–253 ಅನ್ನು ವಾಣಿಜ್ಯ ತೆರಿಗೆ ಅಧಿಕಾರಿಗಳು ಹಾಗೂ ಅರಣ್ಯ ಇಲಾಖೆಯ ಸಿಬ್ಬಂದಿಗಳು ಗುಮಾನಿ ಮೇಲೆ ತಡೆದು ನಿಲ್ಲಿಸಿ ಪರಿಶೋಧನೆ ಮಾಡುವಾಗ ಬಸ್ಸಿನ ಒಳಗಡೆ ಇದ್ದ ಆಸಾಮಿಯು ಒಂದು ರಟ್ಟಿನ ಬಾಕ್ಸನ್ನು ಮತ್ತು ಒಂದು ಸ್ಯೂಟ್‌ಕೇಸನ್ನು ಇಟ್ಟುಕೊಂಡಿರುವುದು ಕಂಡುಬಂದು ನಂತರ ಸದರಿ ಪೆಟ್ಟಿಗೆಯನ್ನು ಒಂದು ಕಡೆ ಒಡೆದು ನೋಡಲಾಗಿ, ಅದರಲ್ಲಿ ಶ್ರೀಗಂಧದ ಸಣ್ಣ ತುಂಡುಗಳು ಇರುವುದು ಕಂಡುಬಂದಿರುತ್ತದೆ. ತದನಂತರ ಆಸಾಮಿಯನ್ನು ಮಾಲು ಸಮೇತ ಇಲಾಖಾ ಪರ ವಶಪಡಿಸಿಕೊಂಡು ತನಿಖೆ ಮಾಡಲಾಗಿ, ಆಂದ್ರಪ್ರದೇಶದ ಕಡಪದಿಂದ ಬೆಂಗಳೂರಿನ ಕಟ್ಟಿಗೇನಹಳ್ಳಿಯಲ್ಲಿರುವ ಆಸಾಮಿಗೆ ನೀಡಲು ತಂದಿರುವುದಾಗಿ ತಿಳಿಸಿರುತ್ತಾನೆ. ಆಸಾಮಿಯ ಹೆಸರು ಮತ್ತು ವಿಳಾಸ ಕೇಳಲಾಗಿ, ಪ್ರತಾಪ್ ಬಿನ್ ವೀರಾರೆಡ್ಡಿ, ವಯಸ್ಸು 19 ವರ್ಷ, ಕಡಪ ಜಿಲ್ಲೆ, ಆಂದ್ರಪ್ರದೇಶ ಎಂದು ತಿಳಿಸಿರುತ್ತಾನೆ. ಆಸಾಮಿಯ ಬಳಿ ಇದ್ದ ಶ್ರೀಗಂಧವನ್ನು ತೂಕ ಮಾಡಲಾಗಿ, ಒಟ್ಟು 23 ಕೆ.ಜಿ ಶ್ರೀಗಂಧದ ತುಂಡುಗಳಿರುತ್ತದೆ. ಸೂಕ್ತ ರಹದಾರಿ ಇಲ್ಲದೇ ಶ್ರೀಗಂಧವನ್ನು ಸಾಗಣೆ ಮಾಡುವುದು ಕರ್ನಾಟಕ ಅರಣ್ಯ ಕಾಯ್ದೆ 1963ರ ಪ್ರಕಾರ ಅಕ್ರಮವಾಗಿರುವುದರಿಂದ ಆರೋಪಿಯನ್ನು ಹಾಗೂ ಶ್ರೀಗಂಧವನ್ನು ಮಹಜರ್ ಸಹಿತ ಸರ್ಕಾರದ ಪರ ಅಮಾನತ್ತುಪಡಿಸಿಕೊಂಡು ಅರಣ್ಯ ಅಪರಾಧ ಮೊಕದ್ದಮೆಯನ್ನು ದಾಖಲಿಸಿರುತ್ತಾರೆ. ಬಂಧಿಸಲಾದ ಆರೋಪಿಯನ್ನು ಮಾನ್ಯ 3ನೇ ಎ.ಸಿ.ಎಂ.ಎಂ ನ್ಯಾಯಾಲಯಕ್ಕೆ ಹಾಜರುಪಡಿಸಿ ನಂತರ ಆರೋಪಿಯನ್ನು ನ್ಯಾಯಂಗ ಬಂಧನಕ್ಕೆ ಒಳಪಡಿಸಲಾಗಿರುತ್ತದೆ.

2. ಹೆಚ್ಚಿನ ತನಿಖೆಗಾಗಿ 23 ಕೆ.ಜಿ ಶ್ರೀಗಂಧದ ತುಂಡುಗಳನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಬೆಂಗಳೂರು ರವರ ಸಮಕ್ಷಮ ಹಾಜರುಪಡಿಸಿರುತ್ತಾರೆ. ಜಪ್ತು ಮಾಡಲಾದ ಮುದ್ದೆಮಾಲನ್ನು ಸುರಕ್ಷತೆಗಾಗಿ ಅರಣ್ಯ ಸಂಚಾರಿ ದಳದ ದಾಸ್ತಾನು ಮಳಿಗೆಯಲ್ಲಿ ಇಡಲಾಗಿರುತ್ತದೆ.

3. ಸೂಕ್ತ ರಹದಾರಿ ಇಲ್ಲದೇ ಅಕ್ರಮವಾಗಿ ಶ್ರೀಗಂಧವನ್ನು ಸಾಗಣೆ ಮಾಡುವುದು ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 87ರ ಉಲ್ಲಂಘನೆಯಾಗಿದ್ದು, ಸದರಿ ಕಾಯ್ದೆಯ ಸೆಕ್ಷನ್ 71ಎ ರಡಿಯಲ್ಲಿ ಕ್ರಮ ಜರುಗಿಸಲು ಅಮಾನತ್ತುಪಡಿಸಿಕೊಂಡಿರುವ 23 ಕೆ.ಜಿ ಶ್ರೀಗಂಧವನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಕ್ರಮ ಜರುಗಿಸುವಂತೆ ವಲಯ ಅರಣ್ಯಾಧಿಕಾರಿಗಳು, ಅರಣ್ಯ ಸಂಚಾರಿ ದಳ, ಬೆಂಗಳೂರು ಇವರು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಬೆಂಗಳೂರು ರವರನ್ನು ಕೋರಿರುತ್ತಾರೆ.

4. ಪ್ರಕರಣಕ್ಕೆ ಸಂಬಂಧಿಸಿದ ಸರ್ಕಾರಿ ಪರ ಸಾಕ್ಷಿಗಳಾದ ಶ್ರೀ.ಆರ್.ಶಿವಕುಮಾರ್ ಬಿನ್ ವಿ.ಆರ್.ರಾಮಯ್ಯ, ಉಪ ವಲಯ ಅರಣ್ಯಾಧಿಕಾರಿ (ಅಂದಿನ ಅರಣ್ಯ ರಕ್ಷಕ), ಶ್ರೀ.ಹೆಚ್.ಶಿವಾನಂದ ಬಿನ್ ಹೊನ್ನಯ್ಯ, ವಲಯ ಅರಣ್ಯಾಧಿಕಾರಿ (ಅಂದಿನ ಅರಣ್ಯ ರಕ್ಷಕ) ಹಾಗೂ ಶ್ರೀ.ಟಿ.ಎಸ್.ಶಿವಾನಂದ ಬಿನ್ ಶ್ರೀ.ರಂಗಯ್ಯ, ವಲಯ ಅರಣ್ಯಾಧಿಕಾರಿ (ಅಂದಿನ ಅರಣ್ಯ ರಕ್ಷಕ) ಇವರ ಮುಖ್ಯ ವಿಚಾರಣೆಯನ್ನು ಸಹಾಯಕ ಸರ್ಕಾರಿ ಅಭಿಯೋಜಕರು ದಿನಾಂಕ:20–01–2012 ರಂದು ಪಡೆದಿರುತ್ತಾರೆ. ಶ್ರೀ.ಎಸ್.ಎನ್.ರಂಗಯ್ಯ, ವನಪಾಲಕ ಇವರು ಗೈರು ಹಾಜರಾದ ಕಾರಣ ವಿಚಾರಣೆಗೆ ಒಳಪಡಿಸಲಾಗಿರುವುದಿಲ್ಲ. ಹಾಜರಿದ್ದ ಸರ್ಕಾರಿ ಸಾಕ್ಷಿಗಳು ನೀಡಿರುವ ಹೇಳಿಕೆಗಳು ಪ್ರಕರಣದಲ್ಲಿ ಒಟ್ಟು 23 ಕೆ.ಜಿ ಶ್ರೀಗಂಧದವನ್ನು ಅಕ್ರಮವಾಗಿ ಸಾಗಣೆ ಮಾಡಿರುವ ಬಗ್ಗೆ ಸಾಕ್ಷಿ ನೀಡಿರುವುದರಿಂದ ಗೈರು ಹಾಜರಿರುವ ಸಾಕ್ಷಿಗಳ ವಿಚಾರಣೆ ಅವಶ್ಯಕತೆ ಇಲ್ಲವೆಂದು ಸರ್ಕಾರಿ ವಕೀಲರು ವಾದವನ್ನು ಮಂಡಿಸಿರುತ್ತಾರೆ.

5. ಸರ್ಕಾರಿ ಸಾಕ್ಷಿಗಳು ನೀಡಿರುವ ಹೇಳಿಕೆಗಳು ಮತ್ತು ಪ್ರಕರಣದಲ್ಲಿ ಲಭ್ಯವಿರುವ ದಾಖಲೆಗಳನ್ನು ಆಧರಿಸಿ ಸರ್ಕಾರಿ ವಕೀಲರು ವಾದವನ್ನು ಮಂಡಿಸಿರುತ್ತಾರೆ. ಸರ್ಕಾರಿ ವಕೀಲರ ವಾದ ಹಾಗೂ ಹಾಜರುಪಡಿಸಿರುವ ದಾಖಲೆಗಳನ್ನು ಪರಿಶೀಲಿಸಲಾಯಿತು. ಪ್ರತಿವಾದಿಗಳು ಹಾಜರಿರದ ಕಾರಣ, ಅವರ ವಿಳಾಸ ಪತ್ತೆಯಾಗದ ಕಾರಣ, ನನ್ನ ಎದುರಿನಲ್ಲಿ ಹಾಜರುಪಡಿಸಿರುವ ದಾಖಲೆಗಳ ಆದಾರದ ಮೇಲೆ ತೀರ್ಮಾನವನ್ನು ಕೈಗೊಳ್ಳಬೇಕಾಗಿರುತ್ತದೆ. ತೀರ್ಮಾನವನ್ನು ಕೈಗೊಳ್ಳಲು ಈ ಕೆಳಕಂಡ ಅಂಶಗಳನ್ನು ಪರಿಗಣಿಸಬೇಕಾಗಿದೆ.

## ಕಂದಾಯ ಸಚಿವಾಲಯ

**ಸಂಖ್ಯೆ:ಕಂಇ 114 ಎಲ್‌ಆರ್‌ಎಂ 2011 ಬೆಂಗಳೂರು, ದಿನಾಂಕ:23–06–2012**

## ಅಧಿಸೂಚನೆ

ಮೆ: ಜೆ.ಕೆ.ಸಿಮೆಂಟ್ಸ್ ಲಿಮಿಟೆಡ್., ಮುದ್ದಾಪುರ ಇವರಿಗೆ ಬಾಗಲಕೋಟೆ ಜಿಲ್ಲೆ, ಮುಧೋಳ ತಾಲ್ಲೂಕು, ಹಲಕಿ ಮತ್ತು ಮೆಟಗುಡ್ಡ ಗ್ರಾಮದ ವಿವಿಧ ಸರ್ವೆ ನಂಬರ್‌ಗಳಲ್ಲಿ 84 ಎಕರೆ 15 ಗುಂಟೆ ಮುದ್ದಾಪುರ ಗ್ರಾಮದ ವಿವಿಧ ಸರ್ವೆ ನಂಬರ್‌ಗಳಲ್ಲಿ ಖನಿಜ ತೆಗೆಯುವ ನಿರ್ಮಾಣಕ್ಕಾಗಿ 126 ಎಕರೆ 13 ಗುಂಟೆ ಹಾಗೂ ಪ್ಲಾಂಟಿಗಾಗಿ ಮುದ್ದಾಪುರ ಗ್ರಾಮದ ವಿವಿಧ ಸರ್ವೆ ನಂಬರ್‌ಗಳಲ್ಲಿ 17 ಎಕರೆ 34 ಗುಂಟೆ ಹೀಗೆ ಒಟ್ಟು 228 ಎಕರೆ 22 ಗುಂಟೆ ಜಮೀನನ್ನು **ಕೈಗಾರಿಕಾ ಉದ್ದೇಶಕ್ಕಾಗಿ** ಖರೀದಿಸಲು ನಮೂನೆ 15–ಎ ಮತ್ತು ನಮೂನೆ 15–ಎಎ ಗಳಲ್ಲಿ ವಿವರ ಸಲ್ಲಿಸುತ್ತಾ ಕರ್ನಾಟಕ ಭೂ ಸುಧಾರಣೆ ಅಧಿನಿಯಮ 1961ರ ಕಲಂ 109 (1ಎ)ರಡಿ ಅನುಮೋದನೆ/ವಿನಾಯಿತಿ ನೀಡಲು ಕೋರಿ ಜಿಲ್ಲಾಧಿಕಾರಿ, ಬಾಗಲಕೋಟೆ ಇವರು ಪತ್ರ ಸಂಖ್ಯೆ:ಆರ್‌ಬಿ/ಕೆಎಲ್‌ಆರ್/ಸಿಆರ್–30/2011–12 ದಿನಾಂಕ:01–12–2011ರಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಉಲ್ಲೇಖಿತ ಜಮೀನು ಕರ್ನಾಟಕ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್) ಅಧಿನಿಯಮ 1978, ಕರ್ನಾಟಕ ಭೂ ಮಂಜೂರಾತಿ ನಿಯಮಗಳು (1969) ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ಸಾರ್ವಜನಿಕ ಹಿತಾಸಕ್ತಿಯ ಮೇಲೆ ಕಾರಣಗಳನ್ನು ದಾಖಲಿಸಿ ನಿರ್ದಿಷ್ಟ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣಾ ಅಧಿನಿಯಮ 1961ರ ಕಲಂ 63, 79ಎ, 79ಬಿ ಅಥವಾ 80ರ ಅವಕಾಶಗಳಿಂದ ವಿನಾಯಿತಿ ನೀಡಲು ಸದರಿ ಅಧಿನಿಯಮದ ಕಲಂ 109(1) ರಡಿ ಅವಕಾಶ ಕಲ್ಪಿಸಿದೆ.

ಸದರಿ ಪ್ರಸ್ತಾವನೆಯು ಕರ್ನಾಟಕ ಭೂ ಸುಧಾರಣೆ ಅಧಿನಿಯಮ (1961) ರ ಕಲಂ 109(1ಎ) ಮತ್ತು ಕರ್ನಾಟಕ ಭೂ ಸುಧಾರಣೆ ನಿಯಮಗಳ (1974)ರ ನಿಯಮ 38–ಬಿ ಮತ್ತು 38–ಸಿ ರಲ್ಲಿನ ಷರತ್ತುಗಳನ್ನು ಪೂರೈಸಿದ್ದು ಕರ್ನಾಟಕ ಭೂ ಸುಧಾರಣೆ ಅಧಿನಿಯಮ 1961ರ ಕಲಂ 63, 79ಎ, 79ಬಿ, ಅಥವಾ 80ಕ್ಕೆ ವಿನಾಯಿತಿ ನೀಡಿ ಜಿಲ್ಲಾಧಿಕಾರಿಯವರ ವರದಿಯ ಮೇರೆಗೆ ಮೆ: ಜೆ.ಕೆ.ಸಿಮೆಂಟ್ಸ್ ಲಿಮಿಟೆಡ್., ಮುದ್ದಾಪುರ ಇವರಿಗೆ ಬಾಗಲಕೋಟೆ ಜಿಲ್ಲೆ, ಮುಧೋಳ ತಾಲ್ಲೂಕು, ಹಲಕಿ ಮತ್ತು ಮೆಟಗುಡ್ಡ ಗ್ರಾಮದ ವಿವಿಧ ಸರ್ವೆ ನಂಬರ್‌ಗಳಲ್ಲಿ 84 ಎಕರೆ 15 ಗುಂಟೆ ಮುದ್ದಾಪುರ ಗ್ರಾಮದ ವಿವಿಧ ಸರ್ವೆ ನಂಬರ್‌ಗಳಲ್ಲಿ ಖನಿಜ ತೆಗೆಯುವ ನಿರ್ಮಾಣಕ್ಕಾಗಿ 126 ಎಕರೆ 13 ಗುಂಟೆ ಹಾಗೂ ಪ್ಲಾಂಟಿಗಾಗಿ ಮುದ್ದಾಪುರ ಗ್ರಾಮದ ವಿವಿಧ ಸರ್ವೆ ನಂಬರ್‌ಗಳಲ್ಲಿ 17 ಎಕರೆ 34 ಗುಂಟೆ ಹೀಗೆ ಒಟ್ಟು 228 ಎಕರೆ 22 ಗುಂಟೆ ಜಮೀನನ್ನು **ಕೈಗಾರಿಕಾ ಉದ್ದೇಶಕ್ಕಾಗಿ** ಖರೀದಿಸಲು ಕರ್ನಾಟಕ ಭೂ ಸುಧಾರಣೆ ಅಧಿನಿಯಮ (1961) ರ ಕಲಂ 109 (1ಎ) ರಡಿ ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಸರ್ಕಾರದ ಅನುಮತಿ ನೀಡಲಾಗಿದೆ:–

1) ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸಂಬಂಧಪಟ್ಟ ಜಮೀನನ್ನು ಉಪಯೋಗಿಸತಕ್ಕದ್ದು
2) ಈ ಕುರಿತಂತೆ ಸಂಬಂಧಪಟ್ಟ ಜಿಲ್ಲಾಧಿಕಾರಿಗಳ ಮುಖಾಂತರ ಸರ್ಕಾರಕ್ಕೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
3) ಈ ಅನುಮತಿಯು ಕರ್ನಾಟಕ ಭೂಸುಧಾರಣೆ ಅಧಿನಿಯಮ (1961)ದ ಕಲಂ 109 ರನ್ವಯ ವಿನಾಯಿತಿ ಮಾತ್ರವಾಗಿದ್ದು ಬೇರೆ ಕಾನೂನುಗಳ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.
4) ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ, ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯ್ದೆ, 1956ರ ಕಲಂ 3 ರಲ್ಲಿ ಹೇಳಿರುವಂತೆ ಶೇಕಡ 51 ಪೇಯ್ಡ್ ಅಪ್ ಷೇರು ಬಂಡವಾಳ ಹೊಂದಿದ ರಾಜ್ಯ ಸರ್ಕಾರ ಅಥವಾ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ನಿಯಂತ್ರಿತ ಅಥವಾ ಎರಡರ ಹಿಡಿತ ಹೊಂದಿರುವ ಸರ್ಕಾರದ ಸಂಘ/ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆ ಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ನಿಗದಿತ ಉದ್ದೇಶಕ್ಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.
5) ಸದರಿ ಜಮೀನನ್ನು ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಕರ್ನಾಟಕ ಭೂ ಕಂದಾಯ ಅಧಿನಿಯಮ (1964)ದ ಕಲಂ 95 ರ ಮೇರೆಗೆ ಸಂಬಂಧಪಟ್ಟ ಜಿಲ್ಲಾಧಿಕಾರಿಯವರಿಂದ ಅನುಮತಿ ಪಡೆಯತಕ್ಕದ್ದು.
6) ಉಲ್ಲೇಖಿತ ಜಮೀನುಗಳಲ್ಲಿ ಯಾವುದೇ ಅಭಿವೃದ್ಧಿ ಕಾರ್ಯ ಕೈಗೊಳ್ಳುವ ಮೊದಲು ಜಮೀನಿನ ವಿನ್ಯಾಸಕ್ಕೆ ನಗರ ಯೋಜನಾ ಇಲಾಖೆ/ಅಭಿವೃದ್ಧಿ ಪ್ರಾಧಿಕಾರ/ಸ್ಥಳೀಯ ಪ್ರಾಧಿಕಾರಗಳಿಂದ ಅನುಮೋದನೆ ಪಡೆಯತಕ್ಕದ್ದು.

7) ಆ ಜಮೀನು ಯಾವುದೇ ನಗರಾಭಿವೃದ್ಧಿ ಪ್ರಾಧಿಕಾರದ ಸಿ.ಡಿ.ಪಿ/ಒ.ಡಿ.ಪಿ. ವ್ಯಾಪ್ತಿಯೊಳಗೆ ಬಂದಲ್ಲಿ ಸಂಬಂಧಪಟ್ಟ ಪ್ರಾಧಿಕಾರದ ಅನುಮತಿ ಪಡೆಯತಕ್ಕದ್ದು.

8) ಸಂಸ್ಥೆ ನಡೆಸುವ ಚಟುವಟಿಕೆಗಳು ಸ್ಥಳೀಯ ಕಾನೂನು, ಕರ್ನಾಟಕ ಮತ್ತು ಭಾರತ ಸರ್ಕಾರದ ಕಾನೂನುಗಳನ್ನು ಪಾಲಿಸತಕ್ಕದ್ದು.

ಈ ಮೇಲಿನ ಯಾವುದೇ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾಗಿರುವ ಅನುಮತಿಯನ್ನು ಕಾನೂನು ರೀತ್ಯ ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಿಕೊಳ್ಳಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಎನ್. ಶ್ರೀನಿವಾಸ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಭೂ ಸುಧಾರಣೆ)

**ಪಿ.ಆರ್. 879**

**ಕಂದಾಯ ಸಚಿವಾಲಯ**

**ಸಂಖ್ಯೆ:ಕಂಇ 108 ಎಲ್‌ಆರ್‌ಎಂ 2011 ಬೆಂಗಳೂರು, ದಿನಾಂಕ:23-06-2012**

**ಅಧಿಸೂಚನೆ**

ಮೆ: ಎಕ್ಸ್ ಇಂಡಿಯಾ ಸ್ಟೀಲ್ಸ್ ಲಿಮಿಟೆಡ್, ಬೆಂಗಳೂರು ಇವರಿಗೆ ಕೊಪ್ಪಳ ಜಿಲ್ಲೆ, ಕೊಪ್ಪಳ ತಾಲ್ಲೂಕಿನ ಹಿರೇಬಗನಾಳ ಗ್ರಾಮದ ಸರ್ವೆ ನಂ.179/2/1 ರಲ್ಲಿ 3-35 ಎಕರೆ, ಸ.ನಂ.179/3 ರಲ್ಲಿ 3-10 ಎಕರೆ, ಸ.ನಂ.176/1 ರಲ್ಲಿ 1-17 ಎಕರೆ ಹಾಗೂ ಕುಣಿಕೇರಿ ಗ್ರಾಮದ ಸರ್ವೆ ನಂಬರ್ 351 ರಲ್ಲಿ 5-00 ಎಕರೆ, ಸ.ನಂ.42/ಚ ರಲ್ಲಿ 5-00 ಎಕರೆ ಹೀಗೆ ಒಟ್ಟು 18 ಎಕರೆ 22 ಗುಂಟೆ ಜಮೀನನ್ನು **ಕೈಗಾರಿಕಾ ಉದ್ದೇಶಕ್ಕಾಗಿ** (ಅಂದರೆ ಇಂಟಿಗ್ರೇಟೆಡ್ ಸ್ಟೀಲ್ಸ್ ಪ್ಲಾಂಟ್ ವಿತ್ 250 MW ಕ್ಯಾಪ್‌ಟೀವ್ ಪವರ್ ಪ್ಲಾಂಟ್ ಸ್ಥಾಪಿಸುವ ಸಲುವಾಗಿ) ಖರೀದಿಸಲು ನಮೂನೆ 15-ಎ ಮತ್ತು ನಮೂನೆ 15-ಎಎ ಗಳಲ್ಲಿ ವಿವರ ಸಲ್ಲಿಸುತ್ತಾ ಕರ್ನಾಟಕ ಭೂ ಸುಧಾರಣೆ ಅಧಿನಿಯಮ (1961ದ ಕಲಂ 109 (1ಎ) ರಡಿ ಅನುಮತಿ ನೀಡಲು ಕೋರಿ ಜಿಲ್ಲಾಧಿಕಾರಿ, ಕೊಪ್ಪಳ ಇವರು ಪತ್ರ ಸಂಖ್ಯೆ:ಕಂದಾಯ/ಭೂಸು/35/2010-11 ದಿನಾಂಕ:04-10-2011 ರಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಉಲ್ಲೇಖಿತ ಜಮೀನು ಕರ್ನಾಟಕ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್) ಅಧಿನಿಯಮ 1978, ಕರ್ನಾಟಕ ಭೂ ಮಂಜೂರಾತಿ ನಿಯಮಗಳು (1969) ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ಸಾರ್ವಜನಿಕ ಹಿತಾಸಕ್ತಿಯ ಮೇಲೆ ಕಾರಣಗಳನ್ನು ದಾಖಲಿಸಿ ನಿರ್ದಿಷ್ಟ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣಾ ಅಧಿನಿಯಮ (1961)ದ ಕಲಂ 63, 79ಎ, 79ಬಿ ಅಥವಾ 80ರ ಅವಕಾಶಗಳಿಂದ ವಿನಾಯಿತಿ ನೀಡಲು ಸದರಿ ಅಧಿನಿಯಮದ ಕಲಂ 109(1) ರಡಿ ಅವಕಾಶ ಕಲ್ಪಿಸಿದೆ.

ಸದರಿ ಪ್ರಸ್ತಾವನೆಯು ಕರ್ನಾಟಕ ಭೂ ಸುಧಾರಣೆ ಅಧಿನಿಯಮ (1961)ದ ಕಲಂ 109(1ಎ) ಮತ್ತು ಕರ್ನಾಟಕ ಭೂ ಸುಧಾರಣೆ ನಿಯಮಗಳ (1974)ರ ನಿಯಮ 38-ಬಿ ಮತ್ತು 38-ಸಿ ರಲ್ಲಿನ ಷರತ್ತುಗಳನ್ನು ಪೂರೈಸಿದ್ದು ಕರ್ನಾಟಕ ಭೂ ಸುಧಾರಣೆ ಅಧಿನಿಯಮ 1961ರ ಕಲಂ 63, 79ಎ, 79ಬಿ, ಅಥವಾ 80ಕ್ಕೆ ವಿನಾಯಿತಿ ನೀಡಿ ಜಿಲ್ಲಾಧಿಕಾರಿಯವರ ವರದಿಯ ಮೇರೆಗೆ ಮೆ: ಎಕ್ಸ್ ಇಂಡಿಯಾ ಸ್ಟೀಲ್ಸ್ ಲಿಮಿಟೆಡ್, ಬೆಂಗಳೂರು ಇವರಿಗೆ ಕೊಪ್ಪಳ ಜಿಲ್ಲೆ, ಕೊಪ್ಪಳ ತಾಲ್ಲೂಕಿನ ಹಿರೇಬಗನಾಳ ಗ್ರಾಮದ ಸರ್ವೆ ನಂ.179/2/1 ರಲ್ಲಿ 3-35 ಎಕರೆ, ಸ.ನಂ.179/3 ರಲ್ಲಿ 3-10 ಎಕರೆ, ಸ.ನಂ.176/1 ರಲ್ಲಿ 1-17 ಎಕರೆ ಹಾಗೂ ಕುಣಿಕೇರಿ ಗ್ರಾಮದ ಸರ್ವೆ ನಂಬರ್ 351 ರಲ್ಲಿ 5-00 ಎಕರೆ, ಸ.ನಂ.42/ಚ ರಲ್ಲಿ 5-00 ಎಕರೆ ಹೀಗೆ ಒಟ್ಟು 18 ಎಕರೆ 22 ಗುಂಟೆ ಜಮೀನನ್ನು **ಕೈಗಾರಿಕಾ ಉದ್ದೇಶಕ್ಕಾಗಿ** (ಅಂದರೆ ಇಂಟಿಗ್ರೇಟೆಡ್ ಸ್ಟೀಲ್ಸ್ ಪ್ಲಾಂಟ್ ವಿತ್ 250 MW ಕ್ಯಾಪ್‌ಟೀವ್ ಪವರ್ ಪ್ಲಾಂಟ್ ಸ್ಥಾಪಿಸುವ ಸಲುವಾಗಿ) ಕರ್ನಾಟಕ ಭೂ ಸುಧಾರಣೆ ಅಧಿನಿಯಮ (1961)ದ ಕಲಂ 109 (1ಎ) ರಡಿ ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಸರ್ಕಾರದ ಅನುಮತಿ ನೀಡಲಾಗಿದೆ:-

1) ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸಂಬಂಧಪಟ್ಟ ಜಮೀನನ್ನು ಉಪಯೋಗಿಸತಕ್ಕದ್ದು

2) ಈ ಕುರಿತಂತೆ ಸಂಬಂಧಪಟ್ಟ ಜಿಲ್ಲಾಧಿಕಾರಿಗಳ ಮುಖಾಂತರ ಸರ್ಕಾರಕ್ಕೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.

3) ಈ ಅನುಮತಿಯು ಕರ್ನಾಟಕ ಭೂಸುಧಾರಣೆ ಅಧಿನಿಯಮ (1961)ದ ಕಲಂ 109 ರನ್ವಯ ವಿನಾಯಿತಿ ಮಾತ್ರವಾಗಿದ್ದು ಬೇರೆ ಕಾನೂನುಗಳ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

4) ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ, ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯ್ದೆ, 1956ರ ಕಲಂ 3 ರಲ್ಲಿ ಹೇಳಿರುವಂತೆ ಶೇಕಡ 51 ಪೇಯ್ಡ್ ಅಪ್ ಷೇರು ಬಂಡವಾಳ ಹೊಂದಿದ ರಾಜ್ಯ ಸರ್ಕಾರ ಅಥವಾ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ನಿಯಂತ್ರಿತ ಅಥವಾ ಎರಡರ ಹಿಡಿತ ಹೊಂದಿರುವ ಸರ್ಕಾರದ ಸಂಘ/ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆ ಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ನಿಗದಿತ ಉದ್ದೇಶಕ್ಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.

5) ಸದರಿ ಜಮೀನನ್ನು ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಕರ್ನಾಟಕ ಭೂ ಕಂದಾಯ ಅಧಿನಿಯಮ (1964)ದ ಕಲಂ 95 ರ ಮೇರೆಗೆ ಸಂಬಂಧಪಟ್ಟ ಜಿಲ್ಲಾಧಿಕಾರಿಯವರಿಂದ ಅನುಮತಿ ಪಡೆಯತಕ್ಕದ್ದು.

6) ಉಲ್ಲೇಖಿತ ಜಮೀನುಗಳಲ್ಲಿ ಯಾವುದೇ ಅಭಿವೃದ್ಧಿ ಕಾರ್ಯ ಕೈಗೊಳ್ಳುವ ಮೊದಲು ಜಮೀನಿನ ವಿನ್ಯಾಸಕ್ಕೆ ನಗರ ಯೋಜನಾ ಇಲಾಖೆ/ಅಭಿವೃದ್ಧಿ ಪ್ರಾಧಿಕಾರ/ಸ್ಥಳೀಯ ಪ್ರಾಧಿಕಾರಗಳಿಂದ ಅನುಮೋದನೆ ಪಡೆಯತಕ್ಕದ್ದು.

7) ಆ ಜಮೀನು ಯಾವುದೇ ನಗರಾಭಿವೃದ್ಧಿ ಪ್ರಾಧಿಕಾರದ ಸಿ.ಡಿ.ಪಿ/ಒ.ಡಿ.ಪಿ. ವ್ಯಾಪ್ತಿಯೊಳಗೆ ಬಂದಲ್ಲಿ ಸಂಬಂಧಪಟ್ಟ ಪ್ರಾಧಿಕಾರದ ಅನುಮತಿ ಪಡೆಯತಕ್ಕದ್ದು.

8) ಸಂಸ್ಥೆ ನಡೆಸುವ ಚಟುವಟಿಕೆಗಳು ಸ್ಥಳೀಯ ಕಾನೂನು, ಕರ್ನಾಟಕ ಮತ್ತು ಭಾರತ ಸರ್ಕಾರದ ಕಾನೂನುಗಳನ್ನು ಪಾಲಿಸತಕ್ಕದ್ದು.

ಈ ಮೇಲಿನ ಯಾವುದೇ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾಗಿರುವ ಅನುಮತಿಯನ್ನು ಕಾನೂನು ರೀತ್ಯ ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಿಕೊಳ್ಳಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಎನ್. ಶ್ರೀನಿವಾಸ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಭೂ ಸುಧಾರಣೆ)

**ಪಿ.ಆರ್. 880**

## ಜಂಟಿ ನಿರ್ದೇಶಕರ ಕಛೇರಿ, ಗಣಿ ಮತ್ತು ಭೂವಿಜ್ಞಾನ ಇಲಾಖೆ ನಂ 167, 11 ನೇ ಮೇನ್ ಸರಸ್ವತಿಪುರಂ ಮೈಸೂರು

**ಸಂಖ್ಯೆ: ಗಭೂಇ/ದವ/ಜಂನಿಮೈ/ಕಗಗು:ನಿ-8ಎ/2011-12 ದಿನಾಂಕ: 1-6-2012**

**ಅಧಿಸೂಚನೆ**

ಕರ್ನಾಟಕ ಉಪಖನಿಜ ರಿಯಾಯಿತಿ ನಿಯಮಾವಳಿ-1994, ನಿಯಮ 8ಎ ಉಪನಿಯಮ (1) ರಂತೆ ಈ ಕೆಳಗೆ ನಮೂದಿಸಿರುವ ಪ್ರದೇಶಗಳನ್ನು ಕಲ್ಲು ಗಣಿಗಾರಿಕೆ ಮಾಡುವ ಸಲುವಾಗಿ ಸಾರ್ವಜನಿಕರ ಅವಗಾಹನೆಗಾಗಿ ಪ್ರಕಟಿಸಲಾಗಿದೆ.

ಹಿರಿಯ ಭೂವಿಜ್ಞಾನಿ ಗಣಿ ಮತ್ತು ಭೂವಿಜ್ಞಾನ ಇಲಾಖೆ, ಶಿವಮೊಗ್ಗ ಜಿಲ್ಲೆ, ದೂರವಾಣಿ ಸಂಖ್ಯೆ: 08182 221647 ಇವರಿಂದ ಸದರಿ ಮುಕ್ತವಿರುವ ಪ್ರದೇಶದಲ್ಲಿ ಕಲ್ಲು ಗಣಿ ಗುತ್ತಿಗೆಗಾಗಿ ಅರ್ಜಿಗಳನ್ನು ಸ್ವೀಕರಿಸಲಾಗುವುದು. ಪರಿಷ್ಕತ ನಿಯಮಾವಳಿಯಂತೆ ಅಧಿಕೃತವಾಗಿ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದ 30 ದಿನಗಳ ನಂತರದ ದಿನ ಸಾಮಾನ್ಯ ರಜಾ ದಿನ ಅಥವಾ ಸಾರ್ವತ್ರಿಕ ರಜಾ ದಿನಾವಾದರೆ, ಅರ್ಜಿಯನ್ನು ಮಾರನೇ ಕೆಲಸದ ದಿನದಂದು ಸ್ವೀಕರಿಸಲಾಗುವುದು.

ನಿಗದಿತ ಶುಲ್ಕ ಪಾವತಿ ಮಾಡಿ ನಿಗದಿತ ಅರ್ಜಿ ನಮೂನೆ ಮತ್ತು ಪ್ರದೇಶದ ನಕಾಶೆಯನ್ನು ಹಿರಿಯ ಭೂವಿಜ್ಞಾನಿ, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಶಿವಮೊಗ್ಗ ಇವರಿಂದ ಪಡೆಯಬಹುದಾಗಿರುತ್ತದೆ.

ಆಸಕ್ತಿ ಇರುವವರು ಅರ್ಜಿ ಸಲ್ಲಿಸುವ ಮೊದಲು ಪ್ರದೇಶದ ತಪಾಸಣೆ ಮಾಡಿ, ಖನಿಜ ಸಂಪತ್ತು ಲಭ್ಯತೆ ಇರುವ ಬಗ್ಗೆ ಮತ್ತು ಪ್ರದೇಶದ ಪ್ರಸಕ್ತ ಸ್ಥಿತಿ ಗತಿ ಬಗ್ಗೆ ಖಚಿತ ಪಡಿಸಿಕೊಳ್ಳತಕ್ಕದ್ದು ಕರ್ನಾಟಕ ಉಪಖನಿಜ ರಿಯಾಯಿತಿ ನಿಯಮಾವಳಿ 1994 ನಿಯಮ 8ಎ ರಂತೆ ಅರ್ಜಿಯನ್ನು ಸ್ವೀಕರಿಸಲಾಗುವುದು ಕಲ್ಲು ಗಣಿ ಗುತ್ತಿಗೆ ಮಂಜೂರಾತಿಯು ಕಂದಾಯ ಮತ್ತು ಅರಣ್ಯ ಇಲಾಖೆಯ ನಿರಾಪೇಕ್ಷಣಾ ಪತ್ರದ ಷರತ್ತಿಗೆ ಒಳಪಟ್ಟಿರುತ್ತದೆ.

| ಕ್ರ. ಸಂ | ಜಿಲ್ಲೆ | ತಾಲ್ಲೂಕು | ಖನಿಜ | ಗ್ರಾಮ | ಸರ್ವೆ ನಂ | ವಿಸ್ತೀರ್ಣ ಎಕರೆ | ಬ್ಲಾಕ್ ನಂ. | ಹಿಂದಿನ ಕ.ಗ.ಗು ಸಂಖ್ಯೆ. | ಚೆಕ್ಕುಬಂದಿ |
|---|---|---|---|---|---|---|---|---|---|
| 1 | ಶಿವಮೊಗ್ಗ | ಶಿವಮೊಗ್ಗ | ಕಟ್ಟಡ ಕಲ್ಲು | ಸುಳೇಬೈಲು | 15 | 0.30 | 1 | 392 | ಉ: ಸರ್ವೆ ನಂ 15 ರ ಭಾಗ<br>ದ: ಸರ್ವೆ ನಂ. 15ರ ಭಾಗ<br>ಪೂ:: ಸರ್ವೆ ನಂ.15ರ ಭಾಗ<br>ಪ: : ಸರ್ವೆ ನಂ.15 ರ ಭಾಗ |
| 2 | ಶಿವಮೊಗ್ಗ | ಶಿವಮೊಗ್ಗ | ಕಟ್ಟಡ ಕಲ್ಲು | ಸುಳೇಬೈಲು | 6 | 0.20 | 1 | 126 | ಉ: ಸರ್ವೆ ನಂ 6 ರ ಭಾಗ<br>ದ: ಸರ್ವೆನಂ. 6 &13 ಸುಳೇಬೈಲು ಗ್ರಾಮ<br>ಪೂ: :ಸರ್ವೆ ನಂ. 6 ರ ಭಾಗ<br>ಪ: :ಸರ್ವೆ ನಂ. 6ರ ಭಾಗ |
| 3 | ಶಿವಮೊಗ್ಗ | ಶಿವಮೊಗ್ಗ | ಕಟ್ಟಡ ಕಲ್ಲು | ಸುಳೇಬೈಲು | 112 | 0.10 | 1 | 97 | ಉ:ಸರ್ವೆ ನಂ 20 ಸುಳೇಬೈಲು ಗ್ರಾಮ<br>ದ:ಸರ್ವೆ ನಂ. 112ಮತ್ತು 13ಸುಳೇಬೈಲು ಗ್ರಾಮ<br>ಪೂ: :ಸರ್ವೆ ನಂ. 18 ಸುಳೇಬೈಲು ಗ್ರಾಮ<br>ಪ: :ಸರ್ವೆ ನಂ. 20 ಸುಳೇಬೈಲು ಗ್ರಾಮ |
| 4 | ಶಿವಮೊಗ್ಗ | ಶಿವಮೊಗ್ಗ | ಕಟ್ಟಡ ಕಲ್ಲು | ಸುಳೇಬೈಲು | 278 | 0.20 | 1 | 278 | ಉ:ಸರ್ವೆ ನಂ 278 ರ ಭಾಗ<br>ದ:ಸರ್ವೆ ನಂ. 278ರ ಭಾಗ<br>ಪೂ: :ಸರ್ವೆ ನಂ. 278ರ ಭಾಗ<br>ಪ: :ಸರ್ವೆ ನಂ. 278 ರ ಭಾಗ |

ಜಂಟಿ ನಿರ್ದೇಶಕರು
ಗಣಿ ಮತ್ತು ಭೂವಿಜ್ಞಾನ ಇಲಾಖೆ,
ದಕ್ಷಿಣ ವಲಯ, ಮೈಸೂರು

**ಪಿ.ಆರ್. 811**

**ಕಾರ್ಮಿಕ ಅಧಿಕಾರಿ ಹಾಗೂ ನೌಕರರ ಪರಿಹಾರ ಆಯುಕ್ತರ ನ್ಯಾಯಾಲಯ, ಉಪ ವಿಭಾಗ –1, ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿಯ ಕಛೇರಿಗಳ ಸಂಕೀರ್ಣ, 2ನೇ ಮಹಡಿ, ಪಿ.ಯು. ಕಾಲೇಜ್ ರಸ್ತೆ, ಆರ್. ರಾಜಣ್ಣ ಸರ್ಕಲ್, ತುಮಕೂರು ರಸ್ತೆ ಬಳಿ, ಪೀಣ್ಯ 1ನೇ ಹಂತ, ಬೆಂಗಳೂರು–58.**

**ಸಂಖ್ಯೆ : ಕಾಅಬೆಂ–1/ಇಸಿಎ/ಎಫ್‌ಸಿ/ಸಿಆರ್–17/2012, ದಿನಾಂಕ: 31–05–2012.**

**ಅರ್ಜಿದಾರರು**

1) ಶ್ರೀಮತಿ. ಗಂಗಬೈಲಮ್ಮ,
ಕೋಂ ಲೇಟ್ ಸಿದ್ಧರಾಜು ವಯಸ್ಸು–35
2) ಮಾ: ದೀಪಕ್
ಬಿನ್ ಲೇಟ್ ಸಿದ್ಧರಾಜು, ವಯಸ್ಸು–16.
3) ಮಾ: ಮಂಜುನಾಥ್
ಬಿನ್ ಲೇಟ್ ಸಿದ್ಧರಾಜು, ವಯಸ್ಸು–14,
ಸಾ: ಕೆರೆಕೋತಿಗನೂರುಪಾಳ್ಯ, ಕಂಬಾಲು ಅಂಚೆ,
ಸೋಮಪುರ ಹೋಬಳಿ, ನೆಲಮಂಗಲ ತಾ:
ಬೆಂಗಳೂರು ಗ್ರಾಮಾಂತರ ಜಿಲ್ಲೆ.

ವಿರುದ್ಧ

**ಪ್ರತಿವಾದಿಗಳು**

1) ರಿಲಾಯನ್ಸ್ ಜನರಲ್ ಇನ್ಸೂರೆನ್ಸ್ ಕಂಪನಿ ಲಿ.
ರೀಜನಲ್ ಆಫೀಸ್ ನಂ:28, 5ನೇ ಮಹಡಿ,
ಸೆಂಟೆನರಿ ಬಿಲ್ಡಿಂಗ್, ಎಂ.ಜಿ. ರಸ್ತೆ, ಬೆಂಗಳೂರು.
2) ಶ್ರೀ. ಗೌರೀಶ್ ಹೆಚ್.ಎಂ. ಬಿನ್ ಮೂಡಲಯ್ಯ,
ನಂ:6/1, ಹನುಮಂತಪುರ ವಿಲೇಜ್,
ಬಿಲಿನಕಟೆ ಅಂಚೆ, ನೆಲಮಂಗಲ ತಾ:
ಬೆಂಗಳೂರು ಗ್ರಾಮಾಂತರ ಜಿಲ್ಲೆ.

**ಪ್ರಕಟಣೆ**

ಈ ಮೇಲೆ ನಮೂದಿಸಿದ ಅರ್ಜಿದಾರರು ತಾವು ಮೃತ ಶ್ರೀ.ಸಿದ್ಧರಾಜು ಇವರ ಅವಲಂಬಿತರೆಂದು, ಮೃತನು 2ನೇ ಪ್ರತಿವಾದಿಗಳ ಬಳಿ ಚಾಲಕನಾಗಿ ದಿನಾಂಕ: 11–05–2012ರಂದು ಕೆಲಸ ಮಾಡುವಾಗ ಕೆಲಸದ ವೇಳೆಯಲ್ಲಿ ಹಾಗೂ ಕೆಲಸದ ಕಾರಣದಿಂದ ಉಂಟಾದ ಅಪಘಾತದಲ್ಲಿ ಗಾಯಗೊಂಡು ಮೃತಪಟ್ಟಿರುತ್ತಾರೆಂದು, ಈ ಸಂಬಂಧ ತಮಗೆ ಕಾಯ್ದೆಯ ಅನುಸಾರ ಪ್ರತಿವಾದಿಗಳಿಂದ ಬರತಕ್ಕ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯದ ಮುಂದೆ ದಿನಾಂಕ:28–05–2012ರಂದು ಬೇಡಿಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದಕಾರಣ ಸಾರ್ವಜನಿಕರಿಗೆ ಹಾಗೂ ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಅರ್ಜಿದಾರರ ಬೇಡಿಕೆ ಅರ್ಜಿಯ ಬಗ್ಗೆ ತಮ್ಮ ಆಕ್ಷೇಪಣೆಗಳೇನಾದರೂ ಇದ್ದರೆ ಹಾಗೂ ಮೇಲೆ ನಮೂದಿಸಿರುವ ಅರ್ಜಿದಾರರಲ್ಲದೇ, ತಾವು ಸಹ ಮೃತನ ನಿಜವಾದ "ಅವಲಂಬಿತರು" ಎಂದು ಪರಿಗಣಿಸಲು ಕೇಳಿಕೊಳ್ಳುವುದಾದರೇ, ಅಂತಹವರು ಈ ಪ್ರಕಟಣೆಯು ಈ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 (ಮೂವತ್ತು) ದಿನಗಳೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗಧಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೇ ಇದ್ದಲ್ಲಿ, ಮೇಲ್ಕಂಡ ಅರ್ಜಿದಾರರ ಬೇಡಿಕೆ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ.

**ನೌಕರರ ಪರಿಹಾರ ಆಯುಕ್ತರು ಹಾಗೂ ಕಾರ್ಮಿಕ ಅಧಿಕಾರಿ,**
ಉಪವಿಭಾಗ–1, ಬೆಂಗಳೂರು.

**ಪಿ.ಆರ್. 784**

## ಆರ್ಥಿಕ ಸಚಿವಾಲಯ

**ಸಂಖ್ಯೆ : ಆಇ 12 ಮುಭನಿ 2012, ಬೆಂಗಳೂರು, ದಿನಾಂಕ: 18–05–2012.**

ಕರ್ನಾಟಕ ಸಾಮಾನ್ಯ ಭವಿಷ್ಯ ನಿಧಿ ವಂತಿಕೆದಾರರ ಸಾಮಾನ್ಯ ಭವಿಷ್ಯ ನಿಧಿ ಖಾತೆಯಲ್ಲಿ ಜಮೆಯಾಗಿರುವ ಶಿಲ್ಕಿನ ಮೇಲೆ ಬಡ್ಡಿ ದರವನ್ನು ದಿನಾಂಕ:01–12–2011ರಿಂದ ಜಾರಿಗೆ ಬರುವಂತೆ ವಾರ್ಷಿಕ ಶೇ.8.6ಕ್ಕೆ ನಿಗದಿಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಬಿ.ಎಲ್. ರಮೇಶ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಆಡಳಿತ ಮತ್ತು ಮುಂಗಡಗಳು).

**ಪಿ.ಆರ್. 788**

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು, ಇವರ ನಡವಳಿಗಳು.

**ವಿಷಯ:–** ಕುಮಾರಿ॥ ಸವಿತ.ಬಿ. ಕಿರಿಯ ಮಹಿಳಾ ಆರೋಗ್ಯ ಸಹಾಯಕಿ, ಉಪಕೇಂದ್ರ, ಎಲಿಮಲೆ, ಪ್ರಾಥಮಿಕ ಆರೋಗ್ಯ ಕೇಂದ್ರ, ಕೊಲ್ಲಮೊಗರು, ಇವರ ಕರ್ತವ್ಯ ಲೋಪ/ಅನಧಿಕೃತ ಗೈರು ಹಾಜರಿ ಆರೋಪದ ವಿರುದ್ಧ ಶಿಸ್ತುಕ್ರಮ ಜರುಗಿಸುವ ಕುರಿತಂತೆ–ಅಂತಿಮ ಆದೇಶ

**ಓದಲಾಗಿದೆ:** 1. ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳು, ದಕ್ಷಿಣ ಕನ್ನಡ ಮಂಗಳೂರು ಇವರ ಪತ್ರ ಸಂ:ಸಿ(1)ಕಿಆಸ(ಮ)55/11-12. ದಿನಾಂಕ: 08-07-2011.

**ಪ್ರಸ್ತಾವನೆ:**

ಕುಮಾರಿ॥ ಸವಿತ.ಬಿ. ಕಿರಿಯ ಮಹಿಳಾ ಆರೋಗ್ಯ ಸಹಾಯಕಿ, ಉಪಕೇಂದ್ರ, ಎಲಿಮಲೆ, ಪ್ರಾಥಮಿಕ ಆರೋಗ್ಯ ಕೇಂದ್ರ, ಕೊಲ್ಲಮೊಗರು, ಮಂಗಳೂರು ಜಿಲ್ಲೆ, ಇವರು ದಿನಾಂಕ: 15-02-2007 ರಂದು ಪೂರ್ವಾಹ್ನ ಕರ್ತವ್ಯಕ್ಕೆ ವರದಿ ಮಾಡಿಕೊಂಡಿದ್ದು, ಇವರ ಖಾಯಂ ಪೂರ್ವ ಸೇವಾವಧಿ ಘೋಷಣೆಯಾಗಿರುವುದಿಲ್ಲ. ಇವರು ಸರ್ಕಾರಿ ಕೆಲಸವನ್ನು ಸರಿಯಾಗಿ ನಿರ್ವಹಿಸದೇ ಬೇಜಾವಾಬ್ದಾರಿತನದಿಂದ ವರ್ತಿಸುತ್ತಿದ್ದು, ಇವರ ಕರ್ತವ್ಯ ಲೋಪದ ಬಗ್ಗೆ ತನಿಖೆ ನಡೆಸಲಾಗಿ, ನೌಕರರು ಸೇವೆಯಲ್ಲಿ ಮುಂದುವರೆಯಲು ಇಷ್ಟವಿಲ್ಲವೆಂದು ತಿಳಿಸಿ ರಾಜೀನಾಮೆ ನೀಡಿ ಅಂಗೀಕರಿಸುವಂತೆ ಕೋರಿ ದಿನಾಂಕ: 29-11-2010 ರಿಂದ ಕರ್ತವ್ಯಕ್ಕೆ ಗೈರು ಹಾಜರಾಗಿರುವುದಾಗಿ ತಿಳಿಸಿರುತ್ತಾರೆ. ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು ಗ್ರೂಪ್ "ಡಿ" ವೃಂದದ ನೇಮಕಾತಿ ಪ್ರಾಧಿಕಾರವಾಗಿರುವುದರಿಂದ ಕೆಸಿಎಸ್ (ಸಿಸಿಎ) ನಿಯಮಾವಳಿಗಳು 1957ರ ನಿಯಮ 8 (II) ರಿಂದ 8 (Viii) ವರೆಗಿನ ದಂಡನೆಯನ್ನು ವಿಧಿಸುವ ಸಕ್ಷಮ ಶಿಸ್ತು ಪ್ರಾಧಿಕಾರವಾಗಿರುವುದರಿಂದ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶ ಸಂಖ್ಯೆ : ಡಿಪಿಎನ್(8)ಸಿಆರ್-16/2011-12 ದಿನಾಂಕ: 5-05-2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಗಾಗಿ ಕರ್ನಾಟಕ ನಾಗರೀಕ ಸೇವಾ(ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಡಾ॥ ಟಿ.ಎಸ್. ಚಲುವರಾಜು, ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಆದ ನಾನು ಕುಮಾರಿ॥ ಸವಿತ.ಬಿ. ಕಿರಿಯ ಮಹಿಳಾ ಆರೋಗ್ಯ ಸಹಾಯಕಿ, ಉಪಕೇಂದ್ರ, ಎಲಿಮಲೆ, ಪ್ರಾಥಮಿಕ ಆರೋಗ್ಯ ಕೇಂದ್ರ, ಕೊಲ್ಲಮೊಗರು, ಮಂಗಳೂರು ಜಿಲ್ಲೆ, ಇವರ ಕರ್ತವ್ಯ ಲೋಪ/ಅನಧಿಕೃತ ಗೈರು ಹಾಜರಿ ಆರೋಪವನ್ನು ಗಂಭೀರವಾಗಿ ಪರಿಗಣಿಸಿ ಈ ತಕ್ಷಣದಿಂದ ಜಾರಿಗೆ ಬರುವಂತೆ ಕರ್ನಾಟಕ ನಾಗರೀಕ ಸೇವಾ (ಪ್ರೋಬೆಷನ್) ನಿಯಮಗಳು 1977ರ ನಿಯಮ 6(1) "ಬಿ" ಪ್ರಕಾರ ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸಿದ್ದೇನೆ.

ನಿರ್ದೇಶಕರು,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು,
ಬೆಂಗಳೂರು.

**ಪಿ.ಆರ್. 789**

## ಕಂದಾಯ ಸಚಿವಾಲಯ

### ಅಧಿಸೂಚನೆ

### ನಮೂನೆ – 29

**68ನೇ ಪ್ರಕರಣದ (5)ನೇ ಉಪ ಪ್ರಕರಣದ ಮೇರೆಗಿನ ಘೋಷಣೆ – ನಿಯಮ 96.**

**ಸಂಖ್ಯೆ: ಆರ್‌ಡಿ 720 ಎಲ್‌ಜಿಬಿ 2011, ಬೆಂಗಳೂರು ದಿನಾಂಕ: 07-06-2012.**

ಕರ್ನಾಟಕ ಭೂ ಕಂದಾಯ ಅಧಿನಿಯಮದ 1964ರ 68ನೇ ಪ್ರಕರಣದ (5)ನೇ ಉಪ ಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಸದರಿ ಪ್ರಕರಣದ (1)ನೇ ಉಪ ಪ್ರಕರಣದ ಮೇರೆಗೆ ಹೊರಡಿಸಿದ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಗೊಂಡ ದಿನಾಂಕ: 09-07-2009 ರ ದಿನಾಂಕದ ಎಲ್.ಎನ್.ಡಿ(ಎನ್.ಎ)ಸಿ.ಆರ್:52/2009-10 ರ ಕ್ರಮ ಸಂಖ್ಯೆಯ ಅಧಿಸೂಚನೆಯ ಅನುಸೂಚಿಯಲ್ಲಿ ನಿರ್ಧಿಷ್ಟ ಪಡಿಸಿದ ಮತ್ತು ಕೆಳಗಿನ ಅನುಸೂಚಿಯಲ್ಲಿ ನಿರ್ಧಿಷ್ಟ ಪಡಿಸಿದ ಸರ್ಕಾರಿ ಬಂಡಿದಾರಿ ಮತ್ತು ಕಾಲುದಾರಿ ಜಮೀನು ಸಾರ್ವಜನಿಕರ ಉಪಯೋಗಕ್ಕೆ ಅಗತ್ಯವಿಲ್ಲವೆಂದು ವ್ಯವಹರಣೆಗಳ ದಾಖಲೆಗಳನ್ನು ಮತ್ತು ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆರವರ ವರದಿಯನ್ನು ರಾಜ್ಯ ಸರ್ಕಾರವು ಪರಿಶೀಲಿಸಿದ ತರುವಾಯ, ಸರ್ಕಾರಿ ಬಂಡಿದಾರಿ ಮತ್ತು ಕಾಲುದಾರಿ (ಖರಾಬು) ಜಮೀನಿನ ಮೇಲಣ ಸಾರ್ವಜನಿಕರ ಹಾಗೂ ವ್ಯಕ್ತಿಗಳ ಎಲ್ಲಾ ಹಕ್ಕುಗಳು ಕೊನೆಗೊಳ್ಳತಕ್ಕದೆಂದು ಈ ಮೂಲಕ ಘೋಷಿಸಿದೆ.

### ಅನುಸೂಚಿ

| | |
|---|---|
| ಜಮೀನು ಇರುವ ಗ್ರಾಮ | ನವರತ್ನ ಅಗ್ರಹಾರ |
| ತಾಲ್ಲೂಕು | ಬೆಂಗಳೂರು ಉತ್ತರ (ಅಪರ) ತಾಲ್ಲೂಕು |
| ಜಿಲ್ಲೆ | ಬೆಂಗಳೂರು ನಗರ ಜಿಲ್ಲೆ |
| ಸದರಿ ಭಾಗದ ವರ್ಣನೆ | ಸರ್ಕಾರಿ ಬಂಡಿದಾರಿ ಮತ್ತು ಕಾಲುದಾರಿ (ಖರಾಬು)<br>ಸರ್ವೆ ನಂ.118 |
| ಸರಿ ಸುಮಾರು ವಿಸ್ತೀರ್ಣ | 0-18 ಗುಂಟೆ |

| | |
|---|---|
| ಮೇರೆಗಳು | ಪೂರ್ವಕ್ಕೆ : ರಸ್ತೆ.<br>ಪಶ್ಚಿಮಕ್ಕೆ :ರೀ ಸರ್ವೆ ನಂ. 3<br>ಉತ್ತರಕ್ಕೆ : ರಸ್ತೆ<br>ದಕ್ಷಿಣಕ್ಕೆ : ರಸ್ತೆ |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಕೆ. ರಾಮಸ್ವಾಮಿ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂ.ಮಂ).

**ಪಿ.ಆರ್. 822**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

## ಅಧಿಸೂಚನೆ

**ಸಂಖ್ಯೆ : ಡಿಪಿಎಆರ್ 19 ಹೆಚ್‌ಹೆಚ್‌ಎಲ್ 2012, ಬೆಂಗಳೂರು, ದಿನಾಂಕ: 31–05–2012.**

ಕರ್ನಾಟಕ ವಿಧಾನ ಪರಿಷತ್ತಿನ ಪದವೀಧರ ಮತ್ತು ಶಿಕ್ಷಕರ ಕ್ಷೇತ್ರಗಳಿಗೆ ದಿನಾಂಕ: 10–06–2012ರ ಭಾನುವಾರದಂದು ದ್ವೈವಾರ್ಷಿಕ ಚುನಾವಣೆಯು ನಡೆಯಲಿದ್ದು, ಚುನಾವಣಾ ಕ್ಷೇತ್ರಗಳ ವ್ಯಾಪ್ತಿಯ ಪಟ್ಟಿಯು ಈ ಕೆಳಕಂಡಂತೆ ಇರುತ್ತದೆ.

| ಕ್ರ.ಸಂ. | ವಿಧಾನ ಪರಿಷತ್ ಮತ ಕ್ಷೇತ್ರ |
|---|---|
| 1. | ಕರ್ನಾಟಕ ಈಶಾನ್ಯ ಪದವೀಧರರ ಕ್ಷೇತ್ರ |
| 2. | ಕರ್ನಾಟಕ ನೈರುತ್ಯ ಪದವೀಧರರ ಕ್ಷೇತ್ರ |
| 3. | ಬೆಂಗಳೂರು ಪದವೀಧರರ ಕ್ಷೇತ್ರ |
| 4. | ಕರ್ನಾಟಕ ಆಗ್ನೇಯ ಶಿಕ್ಷಕರ ಕ್ಷೇತ್ರ |
| 5. | ಕರ್ನಾಟಕ ನೈರುತ್ಯ ಶಿಕ್ಷಕರ ಕ್ಷೇತ್ರ |
| 6. | ಕರ್ನಾಟಕ ದಕ್ಷಿಣ ಶಿಕ್ಷಕರ ಕ್ಷೇತ್ರ |

ಮೇಲೆ ತಿಳಿಸಿರುವ ಕ್ಷೇತ್ರಗಳಿಗೆ ದಿನಾಂಕ: 10–06–2012ರ ಭಾನುವಾರದಂದು ಚುನಾವಣೆಯನ್ನು ಘೋಷಿಸಿದ್ದು, ಕೆಲವು ಖಾಸಗಿ ಸಂಸ್ಥೆಗಳು ಹಾಗೂ ಬ್ಯಾಂಕುಗಳು ಭಾನುವಾರದಂದು ಕೆಲಸ ನಿರ್ವಹಿಸುವ ಹಿನ್ನೆಲೆಯಲ್ಲಿ ಸದರಿ ಸಂಸ್ಥೆಗಳಲ್ಲಿ ಕೆಲಸ ನಿರ್ವಹಿಸುವ ಅರ್ಹ ಮತದಾರರು ಮತದಾನ ಮಾಡಲು ಅನುವಾಗುವಂತೆ ರಾಜ್ಯದ ಉಳಿದ ಎಲ್ಲಾ ಕೇಂದ್ರ ಸರ್ಕಾರದ ಕಛೇರಿಗಳಲ್ಲಿ, ರಾಜ್ಯ ಸರ್ಕಾರದ ಕಛೇರಿಗಳಲ್ಲಿ, ಅನುದಾನಿತ ವಿದ್ಯಾ ಸಂಸ್ಥೆಗಳು ಸೇರಿದಂತೆ ಎಲ್ಲಾ ಶೈಕ್ಷಣಿಕ ಸಂಸ್ಥೆಗಳಲ್ಲಿ ರಾಷ್ಟ್ರೀಕೃತ ಹಾಗೂ ಇತರೆ ಬ್ಯಾಂಕುಗಳಲ್ಲಿ, ಸರ್ಕಾರಿ ಕಾರ್ಖಾನೆಗಳಲ್ಲಿ, ಕೇಂದ್ರ ಸರ್ಕಾರದ ಕಾರ್ಖಾನೆಗಳಲ್ಲಿ ಹಾಗೂ ಉಳಿದ ಕೈಗಾರಿಕಾ ಸಂಸ್ಥೆಗಳಲ್ಲಿ ಕೆಲಸ ನಿರ್ವಹಿಸುತ್ತಿದ್ದಲ್ಲಿ ಅಂತಹ ಮತದಾರರಿಗೆ ಮತ ಚಲಾಯಿಸಲು ಅನುಕೂಲ ಮಾಡಿಕೊಡಲು ಸಂಬಂಧಪಟ್ಟ ಕ್ಷೇತ್ರಗಳಲ್ಲಿ ಬೆಳಗಾವಿ ವಿಭಾಗವನ್ನು ಹೊರತುಪಡಿಸಿ, ದಿನಾಂಕ: 10–06–2012 ರ ಭಾನುವಾರದಂದು ವಿಶೇಷ ಸಾಂಧರ್ಬಿಕ ರಜೆಯನ್ನು ಮಂಜೂರು ಮಾಡಲು ಸರ್ಕಾರವು ಸಂಬಂಧಪಟ್ಟವರಿಗೆ ಅನುಮತಿ ನೀಡಿದೆ.

ಸದರಿ ಕ್ಷೇತ್ರಗಳಲ್ಲಿ ಮತದಾನವು ಸುಸೂತ್ರವಾಗಿ ನಡೆಯಲು ಅನುಕೂಲವಾಗುವಂತೆ ಮತದಾನ ನಡೆಯುವ ಮತಕಟ್ಟೆಗಳನ್ನು ಸರ್ಕಾರಿ ಕಛೇರಿಗಳಲ್ಲಿ ಹಾಗೂ ಸರ್ಕಾರಿ ಶಾಲೆಗಳಲ್ಲಿ ಸ್ಥಾಪಿಸಿದಲ್ಲಿ ಅಂತಹ ಕಛೇರಿ ಹಾಗೂ ಶಾಲೆಗಳಿಗೆ ದಿನಾಂಕ: 09–06–2012 ರಂದು ಮತ್ತು ಮತ ಎಣಿಕೆ ದಿನದಂದು ರಜಾ ಘೋಷಿಸುವ ಅವಶ್ಯಕತೆ ಇದ್ದಲ್ಲಿ ಸಂಬಂಧಪಟ್ಟ ಚುನಾವಣಾಧಿಕಾರಿಗಳು ಕ್ರಮ ತೆಗೆದುಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪದ್ಮರಾಜು,**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಆಸು ಇಲಾಖೆ (ರಾಜ್ಯ ಶಿಷ್ಟಾಚಾರ).

**ಪಿ.ಆರ್. 824**

**ಜಿಲ್ಲಾ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಕಲ್ಯಾಣ ಅಧಿಕಾರಿಗಳ ಕಛೇರಿ. ಬೀದರ.**

**ಪ್ರಕಟಣೆ**

**ಸಂಖ್ಯೆ : ಬಿಸಿಎಂ/ಕಾಪತಭ/ಸಿಆರ್12/2012-13, ಬೀದರ್, ದಿನಾಂಕ: 05-06-2012.**

2012-13ನೇ ಸಾಲಿನ ಬೀದರ ಜಿಲ್ಲೆಯಲ್ಲಿ ಕಾನೂನು ಪದವಿ ಪಡೆದಿರುವ 10 ಹಿಂದುಳಿದ ವರ್ಗಗಳ ಮತ್ತು 2 ಮತೀಯ ಅಲ್ಪಸಂಖ್ಯಾತರ ಅಭ್ಯರ್ಥಿಗಳಿಗೆ ಸರಕಾರಿ ವಕೀಲ ಅಥವಾ 20 ವರ್ಷಗಳಿಗಿಂತ ಹೆಚ್ಚಿನ ಅನುಭವ ಉಳ್ಳ ವಕೀಲರಿಂದ ತರಬೇತಿ ಕೊಡಿಸಲು ಅರ್ಜಿಗಳನ್ನು ಆಹ್ವಾನಿಸಲಾಗಿದೆ. ತರಬೇತಿಯ ಅವಧಿಯು 4 ವರ್ಷಗಳಿದ್ದು ತರಬೇತಿ ಅವಧಿಯಲ್ಲಿ ಮಾಸಿಕ ರೂ. 1000/- ತರಬೇತಿ ಭತ್ಯೆ ನೀಡಲಾಗುವುದು. ಅರ್ಜಿಗಳನ್ನು ಸಲ್ಲಿಸಬಯಸುವವರು ಈ ಕೆಳಕಂಡ ಷರತ್ತುಗಳನ್ನು ಪೂರೈಸಿರಬೇಕು.

1) ಅಭ್ಯರ್ಥಿಯು ಹಿಂದುಳಿದ ವರ್ಗಗಳ ಪ್ರವರ್ಗ 1, 2ಎ, 3ಎ, 3ಬಿ ಹಾಗೂ ಮತೀಯ ಅಲ್ಪಸಂಖ್ಯಾತರಾದ ಮುಸ್ಲಿಂ, ಕ್ರಿಶ್ಚಿಯನ್, ಜೈನ್,ಬೌದ್ಧ, ಶಿಖ ಹಾಗೂ ಪಾರ್ಸಿ ಸಮುದಾಯಗಳಲ್ಲಿ ಯಾವುದಾದರೊಂದು ಸಮುದಾಯಕ್ಕೆ ಸೇರಿದ್ದು ಬೀದರ ಜಿಲ್ಲೆಯ ನಿವಾಸಿಯಾಗಿರಬೇಕು.

2) ಅಭ್ಯರ್ಥಿಯ ಕುಟುಂಬ ವಾರ್ಷಿಕ ಆದಾಯ ರೂ. 15,000/-ಕ್ಕೆ ಮೀರಿರಬಾರದು ಪ್ರವರ್ಗ-1ರಡಿಯಲ್ಲಿ ಬರುವ ಹಿಂದುಳಿದ ವರ್ಗಗಳ ಅಭ್ಯರ್ಥಿಗಳಿಗೆ ಆದಾಯದ ಮಿತಿ ಇರುವುದಿಲ್ಲ.

3) ಅಭ್ಯರ್ಥಿಯು ಬಾರ್ ಕೌನ್ಸಿಲ್‌ನಲ್ಲಿ ಹೆಸರನ್ನು ನೋಂದಾಯಿಸಿರಬೇಕು.

4) ಅರ್ಜಿ ಸಲ್ಲಿಸಲು ನಿಗದಿ ಪಡಿಸಿದ ಕಡೆಯ ದಿನಾಂಕಕ್ಕೆ ಪ್ರವರ್ಗ 2ಎ, 3ಎ, ಮತ್ತು 3ಬಿ ಹಾಗೂ ಅಲ್ಪಸಂಖ್ಯಾತರ ಅಭ್ಯರ್ಥಿಯ ವಯಸ್ಸು 30ಕ್ಕೆ ಹಾಗೂ ಪ್ರವರ್ಗ-1ಕ್ಕೆ ಸೇರಿದ ಅಭ್ಯರ್ಥಿಗಳ ವಯಸ್ಸು 31ಕ್ಕೆ ಮೀರಿರಬಾರದು ಮತ್ತು ಅರ್ಜಿ ಸ್ವೀಕರಿಸಲು ನಿಗದಿಪಡಿಸಿರುವ ಕಡೆಯ ದಿನಾಂಕಕ್ಕೆ ಅಭ್ಯರ್ಥಿಯು 3 ವರ್ಷಗಳ ಅವಧಿಯೊಳಗೆ ಕಾನೂನು ಪದವಿ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರಬೇಕು.

ಕಾರಣ ಅರ್ಹ ಅಭ್ಯರ್ಥಿಗಳು ಅರ್ಜಿ ನಮೂನೆಗಳನ್ನು ಕೆಳಗೆ ಸಹಿ ಮಾಡಿದವರ ಕಛೇರಿಯಿಂದ ಪಡೆದು ಕೆಳಕಂಡ ದಾಖಲೆಗಳೊಂದಿಗೆ ಜಿಲ್ಲಾ ಅಧಿಕಾರಿಗಳು ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ ಬಸವನಗರ ಬೀದರ ಇವರಿಗೆ ಈ ಪ್ರಕಟಣೆಯು ಕರ್ನಾಟಕ ಗೆಜೆಟ್ ನಲ್ಲಿ ಪ್ರಕಟಣೆಯಾದ ದಿನಾಂಕದಿಂದ 30 ದಿನಗಳೊಳಗೆ ತಲುಪುವಂತೆ ಸಲ್ಲಿಸುವುದು.

1) ಕಾನೂನು ಪದವಿ ಪರೀಕ್ಷೆಯ ಎಲ್ಲಾ ವರ್ಷಗಳ ಧೃಡೀಕೃತ ಅಂಕಪಟ್ಟಿ.

2) ಸಂಬಂಧ ಪಟ್ಟ ತಹಶೀಲ್ದಾರರಿಂದ ನೀಡಲ್ಪಟ್ಟ ಜಾತಿ ಆದಾಯ ಪ್ರಮಾಣ ಪತ್ರ

3) ವಾಸಸ್ಥಳ ಪ್ರಮಾಣ ಪತ್ರ

4) ಬಾರ್ ಕೌನ್ಸಿಲ್‌ನಲ್ಲಿ ಹೆಸರನ್ನು ನೋಂದಾಯಿಸಿದ ಪ್ರಮಾಣ ಪತ್ರ.

ಅಪೂರ್ಣವಾದ ಹಾಗೂ ಅವಧಿ ಮೀರಿ ಬಂದ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ. ಹೆಚ್ಚಿನ ಮಾಹಿತಿಗಾಗಿ ಈ ಕೆಳಗೆ ಸಹಿ ಮಾಡಿದವರನ್ನು ಕಛೇರಿ ಸಮಯದಲ್ಲಿ ಸಂಪರ್ಕಿಸಬಹುದು.

ಜಿಲ್ಲಾ ಹಿಂದುಳಿದ ವರ್ಗಗಳ ಮತ್ತು
ಅಲ್ಪಸಂಖ್ಯಾತರ ಕಲ್ಯಾಣ ಅಧಿಕಾರಿಗಳು, ಬೀದರ.

**ಪಿ.ಆರ್. 825**

**ಕಂದಾಯ ಸಚಿವಾಲಯ**

**ಅಧಿಸೂಚನೆ**

**ನಮೂನೆ – 29**

**68ನೇ ಪ್ರಕರಣದ (5)ನೇ ಉಪ ಪ್ರಕರಣದ ಮೇರೆಗಿನ ಘೋಷಣೆ – ನಿಯಮ 96.**

**ಸಂಖ್ಯೆ: ಆರ್‌ಡಿ 84 ಎಲ್‌ಜಿಟಿ 2011, ದಿನಾಂಕ: 07-05-2012.**

ಕರ್ನಾಟಕ ಭೂ ಕಂದಾಯ ಅಧಿನಿಯಮ 1964ರ 68ನೇ ಪ್ರಕರಣದ (5)ನೇ ಉಪ ಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಸದರಿ ಪ್ರಕರಣದ (1)ನೇ ಉಪ ಪ್ರಕರಣದ ಮೇರೆಗೆ ಹೊರಡಿಸಿದ ದಿನಾಂಕ: 25-06-2010 ರ (ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಗೊಂಡ ದಿನಾಂಕ: 25-8-2011) ದಿನಾಂಕದ ಕಂ:ಎಲ್‌ಎನ್‌ಡಿ/ಸಿಆರ್/48/2007-08 ರ ಕ್ರಮ ಸಂಖ್ಯೆ ಅನುಸೂಚಿಯಲ್ಲಿ ನಿರ್ಧಿಷ್ಟಪಡಿಸಿದ ಮತ್ತು ಕೆಳಗಿನ ಅನುಸೂಚಿಯಲ್ಲಿ ನಿರ್ಧಿಷ್ಟ ಪಡಿಸಿದ ಸಾರ್ವಜನಿಕ ಬಿ ಖರಾಬು ಭಾಗವು ಸಾರ್ವಜನಿಕರ ಉಪಯೋಗಕ್ಕೆ ಅಗತ್ಯವಿಲ್ಲವೆಂದು

ವ್ಯವಹರಣೆಗಳ ದಾಖಲೆಗಳನ್ನು ಮತ್ತು ಜಿಲ್ಲೆಯ ಡೆಪ್ಯೂಟಿ ಕಮೀಷನರ್ ವರದಿಯನ್ನು ರಾಜ್ಯ ಸರ್ಕಾರವು ಪರಿಶೀಲಿಸಿದ ತರುವಾಯ, ಸಾರ್ವಜನಿಕ ಬಿ ಖರಾಬು ಅಥವಾ ಅದರ ಮೇಲಿನ ಸಾರ್ವಜನಿಕರ ಹಾಗೂ ವ್ಯಕ್ತಿಗಳ ಎಲ್ಲಾ ಹಕ್ಕುಗಳು ಕೊನೆಗೊಳ್ಳತಕ್ಕದೆಂದು ಈ ಮೂಲಕ ಘೋಷಿಸಿದೆ.

**ಅನುಸೂಚಿ**

| | |
|---|---|
| ಸರ್ಕಾರ ಬಿ ಖರಾಬು ಭಾಗವು ಇರುವ ಗ್ರಾಮ | ಕಿಬ್ಬನಹಳ್ಳಿ |
| ತಾಲ್ಲೂಕು | ತಿಪಟೂರು |
| ಜಿಲ್ಲೆ | ತುಮಕೂರು |
| ಸಾರ್ವಜನಿಕ ಬಿ ಖರಾಬು ಜಮೀನಿನ ವರ್ಣನೆ | ರಿ.ಸ.ನಂ.18/1ಇ/1ಎ/1<br>1ಎಕರೆ 15ಗುಂಟೆ |
| ಸಾರ್ವಜನಿಕ ಬಿ ಖರಾಬು ಜಮೀನಿನ ವಿಸ್ತೀರ್ಣ | 3–17 1/2 ಗುಂಟೆ |
| ಮೇರೆಗಳು | ನಕ್ಷೆಯಲ್ಲಿದ್ದಂತೆ |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಹೆಚ್.ಜೆ.ಲಕ್ಷ್ಮೀನಾರಾಯಣ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಭೂ ಮಂಜೂರಾತಿ–3).

**ಪಿ.ಆರ್. 695**

## ತಹಶೀಲ್ದಾರ್‌ರವರ ಕಾರ್ಯಾಲಯ, ಬೆಂಗಳೂರು ಪೂರ್ವ ತಾಲ್ಲೂಕು, ಕೆ.ಆರ್. ಪುರ.

**ಸಾರ್ವಜನಿಕ ಪ್ರಕಟಣೆ**

**ನಮೂನೆ–27**

**ಸಂಖ್ಯೆ : ಎಲ್‌ಎನ್‌ಡಿ.ಸಿಆರ್ : 207/12–13, ದಿನಾಂಕ : 3–7–2012.**

**94ನೇ ನಿಯಮದ 68(1)ನೇ ಪ್ರಕರಣದ ಮೇರೆಗಿನ ಘೋಷಣೆ**

ಸರ್ಕಾರದ ಸ್ವತ್ತಾಗಿರುವ ಹಾಗೂ ಕೆಳಗಿನ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ಸಾರ್ವಜನಿಕ ಕಲ್ಲುಗುಟ್ಟೆ ಖರಾಬು 1–00 ಎಕರೆ 'ಬಿ' ಖರಾಬು ಜಮೀನಿನ ಭಾಗವು ಸಾರ್ವಜನಿಕರ ಉಪಯೋಗಕ್ಕೆ ಅಗತ್ಯವಿಲ್ಲವೆಂದು ರಾಜ್ಯ ಸರ್ಕಾರಕ್ಕೆ ಕಂಡು ಬಂದಿರುವುದರಿಂದ,

ಕರ್ನಾಟಕ ಭೂ ಕಂದಾಯ ಅಧಿನಿಯಮದ 1964ರ 68ನೇ ಪ್ರಕರಣದ (1)ನೇ ಉಪ ಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಸಾರ್ವಜನಿಕ ಕಲ್ಲುಗುಟ್ಟೆ 1–00 ಎಕರೆ 'ಬಿ' ಖರಾಬು ಜಮೀನಿನ ಸದರಿ ಭಾಗವು ಸಾರ್ವಜನಿಕರ ಉಪಯೋಗಕ್ಕೆ ಅಗತ್ಯವಿಲ್ಲವೆಂದು ಮತ್ತು ಸಾರ್ವಜನಿಕ ಕಲ್ಲುಗುಟ್ಟೆ 1–00 ಎಕರೆ 'ಬಿ' ಖರಾಬು ಜಮೀನಿನ ಭಾಗದಲ್ಲಿ ಅಥವಾ ಅದರ ಮೇಲೆ ಸಾರ್ವಜನಿಕರ ಹಾಗೂ ಎಲ್ಲಾ ವ್ಯಕ್ತಿಗಳ ಹಕ್ಕುಗಳು ಕೊನೆಗೊಳ್ಳತಕ್ಕದೆಂದು ಉದ್ದೇಶಿಸಿ, ಈ ಮೂಲಕ ಘೋಷಿಸುತ್ತದೆ.

2. ಸಾರ್ವಜನಿಕ ಹಿತಾಸಕ್ತಿ ಹಕ್ಕಿನ ಜೊತೆಗೆ ಸದರಿ ಭಾಗವು ಸದರಿ ಭಾಗದಲ್ಲೆ ಅಥವಾ ಅದರ ಮೇಲೆ ಹಿತಾಸಕ್ತಿಯುಳ್ಳ ಅಥವಾ ಹಕ್ಕುಳ್ಳ ಅಥವಾ ಈ ಉದ್ದೇಶದಿಂದ ಪ್ರತಿಕೂಲ ಪರಿಣಾಮಕ್ಕೊಳಗಾಗುವ ಸಂಭವವಿರುವ ಇತರೆ ಯಾವುದೇ ಹಿತಾಸಕ್ತಿಯನ್ನು ಹೊಂದಿರುವ ಸಾರ್ವಜನಿಕ ವ್ಯಕ್ತಿಯು ಈ ಅಧಿಸೂಚನೆಯನ್ನು ಹೊರಡಿಸಿದ ತೊಂಬತ್ತು (90) ದಿನದೊಳಗೆ ಸದರಿ ಉದ್ದೇಶದ ಬಗ್ಗೆ ತನ್ನ ಆಕ್ಷೇಪಣೆಗಳನ್ನು ಅಂಥಹ ಹಿತಾಸಕ್ತಿಯ ಅಥವಾ ಹಕ್ಕಿನ ಸ್ವರೂಪವನ್ನು ಮತ್ತು ಪ್ರತಿಕೂಲ ಪರಿಣಾಮವು ಸಂಭವಿಸಿರಬಹುದಾದ ರೀತಿಯನ್ನು ಮತ್ತು ಅಂತಹ ಹಿತಾಸಕ್ತಿ ಅಥವಾ ಹೆಚ್ಚಿನ ಬಗ್ಗೆ ನಷ್ಟ ಪರಿಹಾರಕ್ಕಾಗಿ ಕ್ಲೈಮ್ ಮಾಡಲಾದ ಮೊಬಲಗು ಮತ್ತು ವಿವರಗಳನ್ನು ಜಿಲ್ಲೆಯ ಡೆಪ್ಯೂಟಿ ಕಮೀಷನರಿಗೆ ಬರಹದಲ್ಲಿ ತಿಳಿಸತಕ್ಕದ್ದು ಮತ್ತು ಸದರಿ ಆಕ್ಷೇಪಣೆಗಳನ್ನು ಮತ್ತು ಕ್ಲೈಮ್‌ಗಳನ್ನು ಸದರಿ ಪ್ರಕರಣದಲ್ಲಿ ಉಪಬಂದಿಸಿರುವಂತೆ ಡೆಪ್ಯೂಟಿ ಕಮೀಷನರರು ಪರಿಶೀಲಿಸತಕ್ಕದ್ದು.

**ಅನುಸೂಚಿ**

| | |
|---|---|
| ಭಾಗ ಇತ್ಯಾದಿ ಇರುವ ಗ್ರಾಮಗಳು | ಬೋಗನಹಳ್ಳಿ, ವರ್ತೂರು ಹೋಬಳಿ |
| ತಾಲ್ಲೂಕು | ಬೆಂಗಳೂರು ಪೂರ್ವ ತಾಲ್ಲೂಕು |

| | |
|---|---|
| ಜಿಲ್ಲೆ | ಬೆಂಗಳೂರು ಜಿಲ್ಲೆ |
| ಸರ್ವೆ ನಂಬರ್ | 81 |
| ರಸ್ತೆಯ ಮೊದಲ ಭಾಗ ಅಥವಾ ಭಾಗಗಳ ವರ್ಣನೆ | ಕಲ್ಲುಗುಟ್ಟೆ |
| ರಸ್ತೆಯ ಭಾಗ ಅಥವಾ ಭಾಗಗಳ ಸರಿ ಸುಮಾರು ವಿಸ್ತೀರ್ಣ | ಒಟ್ಟು 1–00 ಎಕರೆ |
| ಸಾರ್ವಜನಿಕ ರಸ್ತೆ/ಬೀದಿ/ಗಲ್ಲಿ/ದಾರಿ ಅಥವಾ ಅದರ ಭಾಗ | ಬೋಗನಹಳ್ಳಿ |

**ತಹಶೀಲ್ದಾರ್**
ಬೆಂಗಳೂರು ಪೂರ್ವ ತಾಲ್ಲೂಕು,
ಕೃಷ್ಣರಾಜಪುರ.

**ಪಿ.ಆರ್. 881**

**ಕಂದಾಯ ಸಚಿವಾಲಯ**

**ಅಧಿಸೂಚನೆ**

**ನಮೂನೆ–29**

**68ನೇ ಪ್ರಕರಣದ (5)ನೇ ಉಪ–ಪ್ರಕರಣದ ಮೇರೆಗಿನ ಘೋಷಣೆ–ನಿಯಮ 96**

**ಸಂಖ್ಯೆ : ಆರ್‌ಡಿ 274 ಎಲ್‌ಜಿಬಿ 2012, ಬೆಂಗಳೂರು, ದಿನಾಂಕ : 4–7–2012.**

ಕರ್ನಾಟಕ ಭೂ ಕಂದಾಯ ಅಧಿನಿಯಮ 1964ರ 68ನೇ ಪ್ರಕರಣದ (5)ನೇ ಉಪ ಪ್ರಕರಣದಿಂದ ಪ್ರದತ್ತವಾದ ಅಧಿಕಾರ ಚಲಾಯಿಸಿ, ಸದರಿ ಪ್ರಕರಣದ (1)ನೇ ಉಪ ಪ್ರಕರಣದ ಮೇರೆಗೆ ರಾಜ್ಯ ಪತ್ರದಲ್ಲಿ ಅಧಿಸೂಚನೆ ಸಂಖ್ಯೆ : ಎಲ್‌ಎನ್‌ಡಿ/ಸಿಆರ್/510/09–10, ದಿನಾಂಕ : 5–9–2011ರ ಮೂಲಕ ಪ್ರಕಟಿಸಲಾದ ಈ ಕೆಳಕಂಡ ಬಿ–ಖರಾಬು ಜಮೀನು ಸಾರ್ವಜನಿಕರ ಉಪಯೋಗಕ್ಕೆ ಅಗತ್ಯವಿಲ್ಲವೆಂಬ ಕುರಿತಂತೆ ಜಿಲ್ಲಾಧಿಕಾರಿ ಬೆಂಗಳೂರು ಜಿಲ್ಲೆ ಇವರ ವರದಿ ಪರಿಶೀಲಿಸಿದ ನಂತರ ಸರ್ಕಾರಿ ಬಿ–ಖರಾಬು ಜಮೀನಿನ ಮೇಲಣ ಸಾರ್ವಜನಿಕರ ಹಾಗೂ ವ್ಯಕ್ತಿಗಳ ಎಲ್ಲಾ ಹಕ್ಕುಗಳು ಕೊನೆಗೊಳ್ಳತಕ್ಕದೆಂದು ಸರ್ಕಾರ ಈ ಮೂಲಕ ಘೋಷಿಸಿದೆ.

**ಅನುಸೂಚಿ**

| ಜಮೀನು ಇರುವ ಗ್ರಾಮ | ಕೋಡಿ ಚಿಕ್ಕನ ಹಳ್ಳಿ |
|---|---|
| ತಾಲ್ಲೂಕು | ಬೇಗೂರು ಹೋಬಳಿ, ಬೆಂಗಳೂರು ದಕ್ಷಿಣ |
| ಜಿಲ್ಲೆ | ಬೆಂಗಳೂರು ಜಿಲ್ಲೆ |
| ಸದರಿ ಭಾಗದ ವರ್ಣನೆ | ಸರ್ಕಾರಿ ಕಲ್ಲುಬಂಡೆ ಮತ್ತು ಕಾಲುವೆ ಸ.ನಂ. 35/1ಬಿ2 ಬಿ–ಖರಾಬು |
| ಸರಿ ಸುಮಾರು ವಿಸ್ತೀರ್ಣ | ಕಲ್ಲುಬಂಡೆ 1.01 ಎಕರೆ ಗುಂಟೆ ಕಾಲುವೆ 0.01 ಗುಂಟೆ ಒಟ್ಟು 1–02 ಎ/ಗು |
| ಮೇರೆಗಳು | ಪೂರ್ವಕ್ಕೆ : ರೀ ಸರ್ವೆ ನಂ. 33/3<br>ಪಶ್ಚಿಮಕ್ಕೆ : ಇದೇ ಸರ್ವೆ ನಂ. 35/1ಬಿ2 ರ ಉಳಿಕೆ<br>ಉತ್ತರಕ್ಕೆ : ರೀ ಸರ್ವೆ ನಂ. 32 ಮತ್ತು ರಿ. ಸರ್ವೆ ನಂ. 31<br>ದಕ್ಷಿಣಕ್ಕೆ : ರೀ ಸರ್ವೆ ನಂ. 35/1ಎ |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಬಿ.ಕೆ. ರಾಮಸ್ವಾಮಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಭೂ.ಮಂ–1).

**ಪಿ.ಆರ್. 904**